# ನೀಲಿ ಚಂದ್ರಮ

ಕವನಗಳು

ಶಿವರಾಮು ಕಾಡನಕುಪ್ಪೆ




ಸಂವಹನ
12/1A, ಈವನಿಂಗ್ ಬಜಾರ್ ಹಿಂಭಾಗ, ಶಿವರಾಂಪೇಟೆ
ಮೈಸೂರು - 570 001

**NEELI CHANDRAMA-** A collection of Poems written by prof: Shivaramu Kadanakuppe, Principal, Vidyavardhaka First grade College, Mysore-570 021 ; Published by Samvahana, Behind the Evening Bazar, Shivarampet, Mysore-570 001 ; First Edition : 1999; Pages : 80 + viii

Price : **Rs. 35-00**



ಬೆಲೆ : ರೂ. **35-00**

ಮುಖಪುಟ ವಿನ್ಯಾಸ : ಶ್ರೀಕಂಠ



Printed by
Sri D.N. Lokappa, B.Sc, B.Lib. Se,
Sri Rajendra Printers & Publishers
Shivarampet, Mysore-570 001
Phone : 425248

ಸುವರ್ಣ, ಸುಶಿ, ನೇಸರ

ಮತ್ತು

ಸಿಲ್ವರ್ ಬರ್ಗ

- ಇವರಿಗೆ ಪ್ರೀತಿಯಿಂದ

# ಮೊದಲ ಮಾತು

ಇಪ್ಪತ್ತಕ್ಕೂ ಹೆಚ್ಚು ವರ್ಷಗಳಿಂದ ನಾನು ಬರೆದ ಕವನಗಳು ಈ ಸಂಕಲನದಲ್ಲಿವೆ. ವರ್ಷಕ್ಕೆ ಒಂದೆರಡುಮೂರು ಕವನಗಳಿಗಿಂತ ಹೆಚ್ಚು ಬರೆಯದ ನಾನು ನಿರಂತರವಾಗಿ ಕಾವ್ಯವನ್ನು ಅಂತರಂಗದಲ್ಲಿ ಜೋಪಾನ ಮಾಡಿದ್ದೇನೆ. ಸಂಖ್ಯಾ ಪ್ರೀತಿಗಿಂತ ಜೀವನ ಪ್ರೀತಿಯನ್ನು ಸ್ಥಾಯಿಯಾಗಿ ಧ್ಯಾನಿಸುತ್ತಾ, ಬದುಕಿನ ನಿಗೂಢಗಳನ್ನು ಶೋಧಿಸುವ ನನ್ನ ಹಾದಿ ನನ್ನನ್ನು ದಿನೇ ದಿನೇ ಹೊರ ಪ್ರಪಂಚಕ್ಕೆ ಮೃದುವಾಗಿಸಿದೆ ; ಆದರೆ ನನ್ನ ಜೀವನ ನಿಷ್ಠೆ ಗಟ್ಟಿಯಾಗಿದೆ. ಈ ಅನುಭವದ ಅಭಿವ್ಯಕ್ತಿಗಳಾಗಿ ಇಲ್ಲಿಯ ಕವನಗಳಿವೆ. ನಾನು ಪ್ರಾರಂಭದಲ್ಲಿ ಬರೆದ ಕವನಗಳು ಕವನ ಸಂಕಲನದ ಕೊನೆಯಲ್ಲಿದ್ದರೆ, ಇತ್ತೀಚಿನ ವರ್ಷಗಳಲ್ಲಿ ಬರೆದವು ಪ್ರಾರಂಭದಲ್ಲಿವೆ.

ಗೆಳೆಯ ಜಿ.ಪಿ. ಬಸವರಾಜು ಅರ್ಥಪೂರ್ಣವಾದ ಬೆನ್ನುಡಿ ಬರೆದಿದ್ದಾರೆ. ಅವರ ಸಾಹಚರ್ಯ, ಆತ್ಮೀಯತೆ ನನ್ನನ್ನು ಸದಾ ಕ್ರಿಯಾಶೀಲವಾಗಿಸಿದೆ. ಡಾ. ರಾಗೌ ಮತ್ತು ಶ್ರೀ ಡಿ.ಎನ್. ಲೋಕಪ್ಪನವರ ಒತ್ತಾಸೆಗಳಿಲ್ಲದಿದ್ದರೆ ಈ ಸಂಕಲನ ಪ್ರಕಟವಾಗುತ್ತಲೇ ಇರಲಿಲ್ಲ. ಇವರಿಬ್ಬರ ಸ್ನೇಹಕ್ಕೆ ಕೃತಜ್ಞನಾಗಿದ್ದೇನೆ.

ಇಲ್ಲಿನ ಕವನಗಳೆಲ್ಲವೂ ಈ ಮೊದಲು ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಪ್ರಕಟಿಸಿದ ಸಂಪಾದಕರೆಲ್ಲರಿಗೂ ವಂದನೆಗಳು.

ಈ ಕವನ ಸಂಕಲನವನ್ನು ಪ್ರೀತಿಯಿಂದ ಪ್ರಕಟಿಸುತ್ತಿರುವ ಸಂವಹನ ಪ್ರಕಾಶನದವರಿಗೂ, ಅಂದವಾಗಿ ಮುದ್ರಿಸಿರುವ ಶ್ರೀ ರಾಜೇಂದ್ರ ಪ್ರಿಂಟರ್ಸ್‌ರವರಿಗೂ ನಾನು ಆಭಾರಿಯಾಗಿದ್ದೇನೆ.

**ಶಿವರಾಮು ಕಾಡನಕುಪ್ಪೆ**

೧೨೫೬, 'ನೇಸರ'
೪ನೇ ಕ್ರಾಸ್, ಪಡುವಣ ರಸ್ತೆ,
ಕುವೆಂಪುನಗರ, ಮೈಸೂರು-೫೭೦ ೦೨೩
೧ ನವೆಂಬರ್ ೧೯೯೯

# ಪರಿವಿಡಿ

# ಮೆದುವಾಗು ಕವಿತೆಯೆ

ಮೆದುವಾಗು ಕವಿತೆಯೆ
ಹೂವಿನ ಹಾಗೆ ಮಗುವಿನ ನಗುವಿನ ಹಾಗೆ
ಶ್ರೀಗಂಧದ ಹಾಗೆ ಅದರ ಸುವಾಸನೆಯ ಹಾಗೆ;
ಮೆದುವಾಗು ಕವಿತೆಯೆ
ಇತಿಹಾಸದ ನೋವಿನ ಹಾಗೆ, ಹೆಣ್ಣಿನ ಎದೆಯ ಹಾಗೆ.

ಆರ್ಭಟದ ರೊಚ್ಚು ಭಾವದ ಹುಚ್ಚು
ತರುವುದಿಲ್ಲ ಸ್ನೇಹ ಕೂಡುವುದಿಲ್ಲ ಮನ;
ಎದೆತುಂಬ ಕೊಡುವುದ ಕಲಿಸು
ಮನ ತುಂಬುವ ಲೋಕಾಲಿಂಗನದ ಕನಸು.

ನರನಾಡಿಗಳಲ್ಲಿ ಮಾನವತೆಯ ರಕ್ತ
ಲಿಂಗಮತವರಿಯದ ಸಾಮ್ರಾಜ್ಯದತ್ತ
ದೇವರ ಹಂಗಿಲ್ಲದ ಬಯಲದೇ ಚಿತ್ತ
ಹಾಡು ಕವಿತೆಯೆ,
ತುಳಿದ ರಕ್ಕಸಿ ನೆಲಕಚ್ಚುವ ತನಕ
ನೋವಕಣ್ಣಲ್ಲಿ ನಗುಬಿರಿವ ತನಕ.

ಕೋಗಿಲೆಯ ಕೂಗಿನಲ್ಲೂ ನೋವಿದೆ
ನವಿಲಿನ ನಾಟ್ಯದಲ್ಲೂ ನೋವಿನ ಚಳುಕಿದೆ;
ಹುಲ್ಲು ಸಸಿ ಪ್ರಾಣಿ ಪಕ್ಷಿ ವಿಕಾಸ ಹೋರಾಟ!
ಇರುವ
ಮನಬಿಚ್ಚಿ ನೋಡುವುದ ಕಲಿಯಬೇಕು!

ಅದಕ್ಕಾಗಿ ಕವಿತೆಯೆ,
ಮೆದುವಾಗು ನನಗೆ ನಗುವಾಗು
ಪ್ರೀತಿಯ ಸೆರಗಾಗು ಮಾನವತೆಯ ಮನೆಯಾಗು;
ಚಿಗುರಾಗು ಎಲೆಯಾಗು ಹೂವಾಗು ಮರವಾಗು
ಬದುಕಾಗು!

# ಸದ್ದಿನ ಮೂಲ ಹಿಡಿಯಲು ಎದ್ದುನಿಂತಿದ್ದೇನೆ

ಮಧ್ಯರಾತ್ರಿಯಲ್ಲಿ ಸದ್ದು ಕೇಳಿ
ಗಕ್ಕಗೆ ಎದ್ದು ಕೂತೆ.
ಎಲ್ಲಿಯದು ಈ ಸದ್ದು? ಕರೆದವರಾರು?
ಬಾಗಿಲು ತೆರೆದ ಹಾಗಾಯ್ತು
ಆದರೆ ಬಾಗಿಲು ತೆರೆದಿಲ್ಲ!
ಕಿಟಕಿಗಳು ಬೆಳಕ ಕಣ್ಣ ಬಿಟ್ಟಂತಾಯ್ತು
ಆದರವು ಕಣ್ಣುರೆಪ್ಪೆ ಮುಚ್ಚಿದಂತಿವೆ!

ಇದು ಹೀಗೆಯೆ-
ಸದಾ ಕರೆವ ಕೂಗು
ಕೈ ನೀಡಿ ತಬ್ಬುವ ಪಾಂಗು!

ಒಮ್ಮೊಮ್ಮೆ ತಲೆಯ ಮೂಲಕ
ಮತ್ತೆ ಒಮ್ಮೊಮ್ಮೆ ಕಾಲ ನರದಿಂದ
ಮೇಲಕ್ಕೆ ಚಿಮ್ಮಿ
ತೊಡೆ ಲಿಂಗ ಉದರ ಎದೆಯ ಸವರುವ
ನಯಗಾರಿಕೆ!

ಅಸ್ಪಷ್ಟತೆಯಲ್ಲಿ ಕ್ರೂರತೆಯಿದೆಯೆ?
ನರಿಯ ವಕ್ರತೆಯಿದೆಯೆ?
ನವಿಲ ಮೋಹಕ ಮಾಟವಿದೆಯೆ?
ಅರ್ಥ ಬಗೆದಷ್ಟು ಪಾತಾಳದ ಬಿಲ ದೊಡ್ಡದಾಗುತ್ತದೆ.

ಈ ಸದ್ದಿನ ಮೂಲ ಹುಡುಕಬೇಕು
ಸಿಕ್ಕಲ್ಲಿ ಜಗ್ಗಿಸಿ ಕೇಳಬೇಕು:

'ನಿನಗೇನು ಅಧಿಕಾರವಿದೆ-ನನ್ನ ಸ್ವಂತ
ಬದುಕಿಗೆ ಕೈಹಾಕಿ ಕಲಸುವ ಉಸಾಬರಿ?'

ಎದ್ದು ನಿಂತಿದ್ದೇನೆ-
ಕೈಯಲ್ಲಿ ಕಾಣದ ಕತ್ತಿಹಿಡಿದು,
ಸದ್ದಿನ ಮೂಲದ ವಾಸನೆ ಹಿಡಿದು
ಶೂನ್ಯದತ್ತ ಪಂಚಭೂತಗಳ ಮುಖ ತಿರುಗಿಸಿ
ಎದ್ದು ನಿಂತಿದ್ದೇನೆ
ಕೈಯಲ್ಲಿ ಕಾಣದ ಕತ್ತಿ ಹಿಡಿದು!

# ಬೆಟ್ಟಬಯಲಾಗಿ ಕೊಳ್ಳಸಮನಾಗಿ

ಮುಂಗಾರು ಮಳೆ ಬಿದ್ದ
ಹೊತ್ತಾರೆ
ಹಸಿರು ಹಸಿರು ಎತ್ತ ನೋಡಿದರೂ;
ಸ್ಫಟಿಕ ಮಂಜುಹನಿಯ ಉಸಿರು
ಗಾಳಿ ನಿಶ್ಚಲ ; ನಗುವೇ ಶಾಂತಿ,
ಪ್ರಕೃತಿತಾಯ ಮೈಯಲ್ಲ ಪುಳಕ!

ಹಸಿರು ಸಾಸಿರ, ಮರ
ಮರಕ್ಕೆ ಉಂಟು ವೈದೃಶ್ಯ
ದೂರಕ್ಕೆ ಮಾತ್ರ ಅದಕ್ಕೆ ಸಾದೃಶ್ಯ!
ಎಲೆ ಎಲೆ ನಕ್ಕರೂ ಉಕ್ಕಿ ಹರಿಯುತ್ತದೆ
ಜೀವತಂತು ಏಕಸೂತ್ರ!

ಈ ಹಸಿರು ಮಧ್ಯೆ ಈ ಶಾಂತಿ ಸೊಬಗ ಹಿಂದೆ
ಇರುವುದಾವ ಗೂಢ?
ನೋವೇ ಇಲ್ಲವೆ ಇಲ್ಲಿ?
ಸುಖದ ತೌರೇ ಈ ಭೂಮಿ?

ಕಣ್ಣಿಗೆ ಕಂಡದ್ದೆಲ್ಲಾ ಸತ್ಯವಾದರೆ
ಅದೆಂಥ ಸರಳ, ಸುಖ?
ಪ್ರಕೃತಿಯಾಗುತ್ತಾಳೆ ಮತ್ತೆ ನಿಗೂಢ!
ಅವಳ ಮುಗಳ್ನಗೆ ಕೂಡ
ತಿಳಿದರೆ ಅಪಹಾಸ್ಯ, ವ್ಯಂಗ್ಯ, ವಿಷಾದ;
ನೋವಿನ ತೆರೆತೆರೆಯಾಗಿ ಬಯಲ ಬೆಳೆ!

ಹಸಿರ ತುದಿಯ ಮೂಲಕ
ಇಳಿದು ರೆಂಬೆ ಕಾಂಡ ಬೇರು
ನೋಡಬೇಕು ಅಲ್ಲಿ:
ಪಾಚಿ ಕೆಸರು ಕೊಳೆತ ನೀರು
ರಕ್ತ ಹೀರುವ ಜಿಗಣೆ; ತಿಂದು ಕೊಬ್ಬಿರುವ ಹೆಬ್ಬಾವು;

ಬರೀ ವಟಗುಟ್ಟುವ ಕಪ್ಪೆ,
ಮರಿಗಳ ತುಳಿದು ನಿಂತ ಹೆಮ್ಮರ
ಗಾಳಿ ಬಿಸಿಲು ಅಪ್ಪನ ಚಪ್ಪೋಡೆಂಬ ಅಹಂಕಾರ!
ಇದರ ಬೇರ ಬಲೆಯಲ್ಲಿ
ಬೆಳೆಯಲೆಲ್ಲಿ ಸಾಧ್ಯ ಹೊಸ ಜೀವ?

ದೈತ್ಯ ಹೆಮ್ಮರ ಬೀಳಲು
ಬಿರುಗಾಳಿ ಬೀಸಬೇಕು!
ಅಂತಿಂಥ ಬಿರುಗಾಳಿ ಅಲ್ಲ-
ಕೊಚ್ಚಿ ಬರಬೇಕು ಬುಡಮೇಲುಮಾಡಿ
ಬೆಟ್ಟ ಬಯಲಾಗಿ ಕೊಳ್ಳಸಮನಾಗಿ,
ಕತ್ತಲೆ ಸರಿದು ಬಿಸಿಲು ಬಿದ್ದು
ಸಸಿಗಿಡದ ನರನರ ನಿಮಿರಿ
ತಲೆ ಎತ್ತಿ ನಿಲ್ಲುವ ತನಕ.

ಆಗ ನೋಡಿ,
ಪ್ರಕೃತಿತಾಯ ಮೈಯೆಲ್ಲಾ ಪುಳಕ!

# ಕಿನ್ನರಿ ಬೊಮ್ಮನ ಸ್ವಗತ

ನಾನು ಕೋಪ ಗೊಂಡಿದ್ದೆ:

ಮನಸ್ಸು ರಾಗಿ ಬೀಸುವ ಕಲ್ಲಿನ ಬಿಸಿ
ಭಾವಗಳ ಉದುರಾಟ.
ಮಹಾಮನೆಗೆ ಮಹಾಮನೆಯೇ ಸಿದ್ಧವಾಗಿ ನಿಂತಿದೆ
ಸ್ವಾಗತಕ್ಕೆ,
ಅದೂ ಗಂಡ ಬಿಟ್ಟವಳ ಮಾನ ಮರ್ಯಾದೆ ಬಿಟ್ಟವಳ
ಸ್ವಾಗತಕ್ಕೆ.
ಮನೆಯ ಯಜಮಾನನಿಗಾದರೂ ಬೇಡವೆ
ವಿವೇಕ?
ಜನ ಏನೆಂದಾರು?ಶರಣರೇನಂದಾರು?
ಅದಿರಲಿ, ಭವಿಗಳೇನಂದಾರು?

ಅವನಿಗೆ ಬೇಕಿಲ್ಲದಿದ್ದರೆ ನನಗೆ ಬೇಕು
ಪರೀಕ್ಷೆ!
ತನುಮನಗಳ ತಡಕುವೆ ಹುಡುಕುವೆ
ಜಾಲಾಡುವೆ ಅವಳ ಜೀವಜಾಲವ ;
ಬೆಂಕಿ ಹಚ್ಚುವೆ ಅವಳ ಹೃದಯಕೆ
ಮೈಯ ಒಂದೊಂದೂ ರಂಧ್ರದಲ್ಲೂ
ಬಯಕೆಯ ಹೊಳೆ ಹರಿಸುವೆ.

ಗೆಲ್ಲಲ್ಲಿ ಅವಳು ಈ ಕಿನ್ನರಿಯ!
ತನು ಗೆದ್ದವಳಂತೆ ಮನಗೆದ್ದವಳಂತೆ!
ಅಷ್ಟು ಸುಲಭವೆ ಮನ್ಮಥಹರಣ!!
ಇಂಥ ಡಾಂಬಿಕರಿಂದ ತುಂಬಿ ಹೋಯ್ತೆ
ಮಹಾಮನೆ! ಇನ್ನೆಲ್ಲಿಯ ಕಲ್ಯಾಣ!!

ಊರ ಬಾಗಿಲಿಗೆ ನಾನೇ ಹೋದೆ.
ನಾನು ಕಂಡದ್ದೇನು?
ನೀರು ಕಾಣದ ಕೆಂಗೂದಲು
ಕೊಳೆ ಮೆತ್ತಿದ ತೊಗಲು
ಅಂಗಾಲೆಲ್ಲ ಕಿತ್ತು ರಕ್ತದ ಹೆಜ್ಜೆ;
ಅಡಿಯಿಂದ ಮುಡಿವರೆಗೆ ಜನ ಕೆತ್ತಿದ
ಅವಮಾನದ ಗಾಯಗುರುತು!

ಒಪ್ಪುವೆನೆ ನಾನು ಬಹಿರಂಗವ?
ಬಹಿರ್ಮುಖಕ್ಕಿಂತ ಅಂತರ್ಮುಖ ತಾನೆ
ಸಾಗರದಾಳ ಪಾತಾಳ.
ಕಂಡವರಾರು ಈ ಗುಹ್ಯಾತ್ ಗೂಢವ?

ಪರೀಕ್ಷೆಗೆ ಕರೆದೆ:
ನಕ್ಕಳು, ಎಂಥಾನಗೆ? ವಿಷಾದ, ವ್ಯಂಗ್ಯ
ಮಾಧಕ ಕಂಗಳ ತಾಯ ಬಿಂಕ!
ಮೈ ಅಲುಗಾಟದಲ್ಲಿಯೇ
ಸ್ವಾಭಿಮಾನದ ಸ್ವಾಗತ

ಮೊದಲು ತಲೆ ಮುಟ್ಟಿದೆ-
ತಣ್ಣಗಿತ್ತು.
ಪರೀಕ್ಷೆಯನ್ನೇ ಪರೀಕ್ಷೆಮಾಡುವ
ಎದೆಗಾರಿಕೆಯಿತ್ತು.
ಕೆನ್ನೆಸವರಿ ತುಟಿಗೆ ತುಟಿಯೊತ್ತಿ
ಕಣ್ಣನೋಡಿದೆ-
ನೋವಿತ್ತು.

ಕತ್ತನೇವರಿಸಿ ಭುಜ ಮುಟ್ಟಿ
ಎದೆಗೆ ಎದೆಯಾನಿಸಿಕೊಂಡೆ-
ಕಣ್ಣೀರ ಹನಿಯೊಂದು
ನನ್ನ ಕೈ ಮೇಲ್ಗೆ ಮುತ್ತಾಯಿತು!

ಸೋಲುವೆನೆ ನಾನು? ಹೆಣ್ಣಾಡುವ ಪ್ರಹಸನ
ಬಲ್ಲವರಾರು?
ಎಚ್ಚರಿಸಿತು ಬುದ್ಧಿಯು.

ಮೊಲೆ ಮುಟ್ಟಿನೋಡಿದೆ
ಅದು ಮೊಲೆಯಲ್ಲ!
ನಡುಮುಟ್ಟಿ ನೋಡಿದೆ
ಅದು ನಡುವಲ್ಲ!
ಯೋನಿ ಮುಟ್ಟಿ ನೋಡಿದೆ
ಅದು ಯೋನಿಯಲ್ಲ!

ಅಂಗಾಂಗ ಸ್ಪರ್ಶಿಸಿ ಅಂಗಾಂಗ ಕಾಣದೆ
ನನ್ನಾತ್ಮಕ್ಕೆ ಇಳಿದು ಬೆವತು ಹೋದೆ.

ಪರೀಕ್ಷೆ ಮಾಡುವೆನೆಂಬ ನನ್ನ ಅಹಂಕಾರಕ್ಕೆ
ಎಂಥ ಶೀತಲ ಉತ್ತರ;
ಎಂಥ ಅಭಿಮಾನದ ಎತ್ತರ!
ಅವಳ
ಪದತಲದಲ್ಲಿ ಕುಸಿದೆ.

ಅವ್ವ ಎಂದೆ
ಅವಳ ಕಣ್ಣೀರಿಗೆ ನನ್ನ ಕಣ್ಣೀರ ಬೆರಸಿದೆ.

ತಾಯ ಎದೆಯ ಸವಿ
ಅವಳ ಕೈಗಳು ನೀಡಿದ ಆಲಿಂಗನದ ಸಾಂತ್ವನ, ಜೋಗುಳ.

ನಾನು ಮತ್ತೆ ಮಗುವಾದೆ.

# ಓನಿ

ಓನಿ ಜಪಾನಿಯರ ಪಿಶಾಚಿ

ನನಗೆ ಅದೊಂದು ತಿಳಿವು
ಕರ್‍ರಗೆ ದಪ್ಪಗೆ ನಕ್ಕರೆ
ಹಲ್ಲು ಬೆಳ್ಳಂ ಬೆಳ್ಳಗೆ ಸಕ್ಕರೆ.

ಅದೊಂದು ಅತೀತ ಶಕ್ತಿ
ಒಲಿದರೆ ಮಿತ್ರ ಮುನಿದರೆ ಮತ್ತಷ್ಟುಗಾತ್ರ
ನೆಂಬ ರೂಢಿಮಾತು ಇಲ್ಲಿ ಕ್ಲೀಷೆ.
ಆತ್ಮಕ್ಕೆ ಆತ್ಮ ಬೆಸೆಯುವುದೊಂದೆ ಇಲ್ಲಿನ ಭಾಷೆ.

ಕಟ್ಟಿದರೆ ಕಟ್ಟೇಬಿಡುತ್ತಾನೆ
ಭೂತವರ್ತಮಾನಗಳ ಮನೆಯ
ಅರ್ಥಬಗೆದಷ್ಟು ವಿಸ್ತಾರವಾಗಿ
ಮುಗಿಲು ಮುಟ್ಟುವ ಬೆರಗು!

ಅಲ್ಲಿ ನೋಡು:
ಬೆಕ್ಕಿನಂತೆ ನೆಗೆಯುವ
ಮಕ್ಕಳಂತೆ ರಂಪವೆಬ್ಬರಿಸುವ
ಕಿತ್ತರೂ ಬಾರದೆ ಅಂಟಿಕೊಳ್ಳುವ
ಬಾಳಿನ ಪರಿಯ-ಅವನು
ಸದಾ ನಗುವ.

ನಾನು ಓಡುತ್ತೇನೆ-
ಸಿಗಬಾರದು ಎಂದು

ಅವನು ನನ್ನ ಮುಟ್ಟಬಾರದು ಎಂದು.
ಮಾಯ ಅಂದರೆ ಮಾಯ

ಎಲ್ಲೆಂದರಲ್ಲಿ
ಸಿಕ್ಕು ಸಿಕ್ಕು ಮುಟ್ಟಿ ಮುಟ್ಟಿ
ನಾನು ಕರಗುತ್ತೇನೆ ಮಗುವಾಗುತ್ತೇನೆ.

ಓನಿಮಾತ್ರ
ಸುಮ್ಮನೆ ಬೆಳೆಯುತ್ತಾನೆ, ಅಳೆಯುತ್ತಾನೆ.

# ನೀಲಿ ಚಂದ್ರಮ

೧

ರಾತ್ರಿ ಕತ್ತಲ
ಬೆಣ್ಣೆ ಮಜ್ಜಿಗೆ ಮಾಡಿ
ಪಕ್ಷಿ ಕೀಟಗಳ ತಲೆ ನೀಲಿ ಬೆಳಕಿನ ಕಣಜವಾಗಿಸಿದ
ತಂಪು ನೀರವತೆಯ ನೀಲಿ ಚಂದ್ರಮನ
ಮಾಯಾಜಾಲ ಆಕಾಶತುಂಬ!

ಗಂಡು ಹೆಣ್ಣಿನ ಕಣ್ಣುನೀಲಿ
ಹೂವು ಪರಾಗ ಮಕರಂದ ನೀಲಿ
ಬೇರು ಕಾಂಡ ಎಲೆಯ ತುದಿ ನೀಲಿ
ಉಸಿರು ನೀಲಿ, ಬಸಿರಾಗುತ್ತಿದೆ ನೀಲಿ!

ಮನಸ್ಸುಗಳು ನೀಲಿಗಟ್ಟಿ
ಸಮರವಾಗಿದೆ ಎದೆಗೂಡು;
ಮಿಲನದಲ್ಲಿ ಸಮರ್ಪಣೆಗಿಂತ
ಆಕ್ರಮಣವೇ ನಗುತ್ತಿದೆ.
ಕಣ್ಣುಗಳು ಕ್ರೂರ, ತೋಳುನರಗಳಲ್ಲಿ
ಭದ್ರ ಬಂಧನ;
ಸುಖದ ನರಳುವಿಕೆಯ ಬದಲು
ಚೀತ್ಕಾರ! ಗಂಟಲಲ್ಲಿ ಬಿಕ್ಕು!

೨

ದೇಶಕೋಶ ನೀಲಿ ರಕ್ತ ದಾಹ
ದಾಹ ಕುಡಿದಷ್ಟೂ ಬೇಕು;
ಜಠರ ಮೀರಿ ಚರ್ಮ ಮೀರಿ

ತೂರಿ ರಕ್ತನಾಳ ಮಿದುಳು ಸೇರಿ,
ಮನೆ ಭಸ್ಮ ಚರ್ಚುಭಸ್ಮಗುಡಿ ಭಸ್ಮ
ಮನಮನಗಳು ಭಸ್ಮ!

ನರನರಗಳಲ್ಲಿ ಕೀಟ ಕ್ರಿಮಿತನ
ಮಿಡಿದು ನಿಂತು
ಕಬಳಿಕೆ ನಿರಂತರ ನೋವು ನಿರಂತರ.
ಕೇಳುವವರ ಮಾತುನೀಲಿ
ಹೇಳುವವರ ಸೊಲ್ಲು ನೀಲಿ
ಶೋಕತಪ್ತರ ಅಳುವು ನೀಲಿ
ಸುರಿವ ರಕ್ತ ನೀಲಿ!

ಹೇಳು, ಸಾಂತ್ವನದ ಬೆಳಕು ಎಲ್ಲಿ?

ಧರ್ಮದ ಬತ್ತಳಿಕೆಗೆ ಜಾತಿಬಾಣಕ್ಕೆ
ಎಳೆ ಮಗುವಿನ ಎದೆಗುರಿ, ಮುಗ್ಧೆಯ ತನುಗುರಿ,
ಬಡಬಗ್ಗರ ಗುಡಿಸಲು ನೀಲಾಗ್ನಿಗೆ ಆಹುತಿ;
ಆಳುವವರ ಕುರ್ಚಿಭಾರಕ್ಕೆ ತಾಯ
ಸ್ತನದ ಬಿರುಕು!
ಹಾಲುಕ್ಕುವ ಜಾಗದಲ್ಲಿ ರಕ್ತಧಾರೆ.

೨

ಏಕೆ ನೀಲಿ ಚಂದ್ರಮ
ತಂಪನ್ನೀವ ನೀನು ಹೀಗಾದೆ?
ಬುದ್ಧಿ ಮಾತ್ರ ಬೆಳೆದು ಭಾವ ನಿಂತು
ಮರದ ಮೇಲೆ ಪಕ್ಷಿಗಳ ಮೌನ ರೋದನ.

ಜೊನ್ನಕುಡಿದು ರಾತ್ರಿಯಿಡೀ
ಜೊತೆಗಾಗಿ ಶೋಧಿಸುವ ಆತ್ಮಕ್ಕೆ
ಸಿಡಿಲ ಹೊಡೆತ!

ನೋಡು, ಕತ್ತಲ ಸೀಳಿ ವಿನಾಶಕ್ಕೆ
ಇಂಬು ಕೊಡುತ್ತಿದೆ, ನಿನ್ನ ನೀಲಿ ಬೆಳಕು!
ಮರ ನೀರು ಕಲ್ಲು ಬೇರು ಪ್ರಕೃತಿ ಸಾಸಿರ
ಹಿಂಗದ ಹಸಿವಿಗೆ ಆಗುತ್ತಿದೆ ಹೂರಣ.

ಕಣ್ಣನೀಲಿ ಕುರುಡು ಮಾಡಿದೆ-
ತಾಯಿ ಮಗನ , ತಂದೆ ಮಗಳ;
ಹಾಲು ಕುಡಿವೆಡೆ ವಿಷ ಕುಡಿವ ಬಯಕೆ
ಮರೆದು ಮೆರೆದು ನಗುವ ಕಾಕು ಸಾಕು.

೪

ನೋಡು ಚಂದ್ರಮ-
ಮತ್ತೊಬ್ಬರ ಜೇಬಿಗೆ ಕೈಯಾಕುವ
ನರಿ ನೀನಾಗಬೇಡ,
ಒಂದೇ ಸರ್ತಿ ನೀಲಿಯಾಗಿ ಇನ್ನೊಬ್ಬರ
ಬೆಳಕ ಕಸಿಯಬೇಡ.

ಬೇಡ ಬೇಡ ದಮ್ಮಯ್ಯ ಬೇಡ
ಹಾಲಿನುಂಡೇ ನೀನು, ಬೆಣ್ಣೆ ಚೆಂಡು ನೀನು
ಕವಿ ಕಣ್ಮಣಿ ನೀನು, ಪ್ರೀತಿ ಸ್ನೇಹಿತ ನೀನು
ಶ್ವೇತವಾಗು ನೀನು, ಹಿತವಾಗು ನೀನು.

ನೀನೆ ಪ್ರಕೃತಿ ನಿಯತಿ ಮರೆತರೆ
ನಮ್ಮ ಗತಿಯೇನು?

೫

ಬಾರಾ ಚಂದ್ರಮ ಬಾರಾ ಬಾ
ಬಿಳಿಯಾಗಿ ಬಾ ತಿಳಿಯಾಗಿ ಬಾ
ಹಿತವಾಗಿ ಬಾ ಹಾಲ್ಗಿರಣವಾಗಿ ಬಾ
ಉಕ್ಕುವ ಉದ್ರೇಕವಳಿದು ಬಾ
ವಿಷ ಹೀನ ಅಮೃತವಾಗು ಬಾ

ಮರೆಯದೆ ತಿಂಗಳಿಗೊಮ್ಮೆ
ತಿಂಗಳನಾಗಿ ಬಾ
ಮನೆಯಂಗಳದಲ್ಲಿ ನಗುವ
ಚೆಲ್ಲು ಬಾ.

# ದೇವರು-ರಾಕ್ಷಸ

ಒಮ್ಮೆ ರಾತ್ರಿಯಲ್ಲಿ
ನನ್ನ ಕೈತೋಟದಲ್ಲೊಂದು
ವಿಸ್ಮಯ ನಡೆಯಿತು.

ನೋಡು ನೋಡುತ್ತಲೇ
ಕಿರೀಟಧಾರಿ ದೇವರು ಬಂದ.
ಅವನ ಹಿಂದೆಯೇ
ಭಾರಿಗಾತ್ರದ ಮಿಸೆ ಹೊತ್ತು
ರಕ್ಕಸನೂ ಬಂದ.

ದೇವನು ಸ್ವರ್ಗದ ಕಡೆ ಕೈ
ತೋರಿ ಬಾ ಎಂದ;
ರಕ್ಕಸ ಭುವಿಯ ವಾಸನೆ
ನೋಡು ಎಷ್ಟು ಚಂದ ಎಂದ.

ನಾನು ಕ್ಷಣ ನಿಶ್ಚಲ ನಿಂತೆ:

ಭುವಿಯಲ್ಲಿ ಬೆಳೆದು ನಿಂತ
ಗಿಡಮರ ಹೂ ಬಳ್ಳಿ ಕಾಯಿ
ಸಮೃದ್ಧ ತೊನೆದವು.

ನಾನು ದೇವನಿಗೆ ಬರುವುದಿಲ್ಲ
ಎಂದೆ.

# ಕತ್ತಲೆ ಖಾಲಿಯಲ್ಲ

ಕತ್ತಲು ನಾನು ಬಿಗಿಯಾದ
ಅಪ್ಪುಗೆಯಲ್ಲಿ ಒಂದಾಗಿದ್ದೆವು.

ಕತ್ತಲ ಶಾಂತತೆ ನನ್ನನ್ನು
ಮೌನ ಯೋಗಿಯನ್ನಾಗಿಸಿತು.

ಕಣ್ಮುಂದೆಯೇ ಕತ್ತಲ ನಿರಂತರ
ಜೀವ ವ್ಯಾಪಾರ, ಅದೂ
ಎಷ್ಟು ನಿಶ್ಯಬ್ಧವಾಗಿ!

ನಕ್ಷತ್ರ ನಕ್ಕರೆ ಮಿಂಚುಹುಳು
ಹಾಡುತ್ತಿತ್ತು.
ಗೂಬೆ ಬಾವಲಿ ಇಲಿಹಾವು
ಜೀವ ಸಮರ!
ಪ್ರಕೃತಿ ಚಕ್ರ ತಿರುಗುತ್ತಿತ್ತು.
ಕಪ್ಪಗೆ ಗಾಳಿಗೆ ತೂಗುವ ಮರ
ಸೊಯ್ಯೆನ್ನುವ ಗಾಳಿ
ದೂರದ ಮನೆಯ ಎಳೆಕಂದನ ಅಳು
ಎಲ್ಲವೂ
ಇಹದ ಬೆಳಕಿನಿರುವನ್ನು
ಮೂಡಿಸಿದ್ದವು.

ಕತ್ತಲೆ ಖಾಲಿಯಲ್ಲ
ಕತ್ತಲೆ
ಬೆಳಕಿನ ತಾಯಿ
ಎಂದು ತಿಳಿವಾಯಿತು.

# ಕಾಬಿ ಬೆಕ್ಕು

ಹಗಲೆಲ್ಲ ಮಲಗುವ ನಮ್ಮ
ಮನೆಯ ಬೆಕ್ಕು ಕಾಬಿ
ರಾತ್ರಿ ಬೇಟೆಗೆ ಹೊರಟಿತು.

ಮೊದಲು ಒಂದು ಸಣ್ಣ ಇಲಿಯನ್ನು
ಹಿಡಿದು ಆಟವಾಡಿ ತಿಂದಿತು.
ಗಿಡದ ಬುಡದಲ್ಲಿ ಸ್ವಲ್ಪ ನಿದ್ರೆ
ಮಾಡಿ ಎದ್ದು ಆಕಳಿಸಿ
ಸದ್ದಿಲ್ಲದೆ ಮರಏರಿ ಸುಖ
ನಿದ್ದೆಯಲ್ಲಿದ್ದ ಗೊರವಂಕನನ್ನು
ಕಬಳಿಸಿತು.
ಮರದ ಟೊಂಗೆಯಲ್ಲೇ ನಿದ್ರೆ
ತೆಗೆದು ಎದ್ದು ಮೈಮುರಿದು
ಕಣ್ಣು ತೆರೆದರೆ ಎದುರಿಗೇ
ಮೊಲ!

ನಿದ್ದೆ ಓಡಿತು, ಬಾಯಲ್ಲಿ ನೀರು!
ತಿಂದೇ ಬಿಡುವೆನೆಂದು ನೆಗೆದರೆ
ಮೊಲ ಓಡಿ ಬಿಡುವುದೆ!

ಮೊಲ ಮುಂದೆ ಬೆಕ್ಕು ಹಿಂದೆ
ಅದರ ಹಿಂದೆ ಹಿಂದೆ
ಒಂದು ನಾಯಿ ಮಂದೆ!

ನಮ್ಮ ಮನೆಯ ಬೆಕ್ಕು
ಕಾಬಿ
ಮನೆಗೆ ಇನ್ನೂ ಬಂದಿಲ್ಲ.

# ಸೃಷ್ಟಿ ಆಟ

ಕಾಮ ರಾತ್ರಿಯಲ್ಲಿ ಕಳ್ಳತನ
ವಾಡುತ್ತದೆಯೆಂದು ನಂಬಿ
ಗಂಡ ಹೆಂಡತಿ
ಬೇರೆ ಬೇರೆ ಮಲಗುತ್ತಿದ್ದರು.

ಗಂಡ ರಾತ್ರಿಯಿಡೀ ನಿದ್ರೆ ಬರದೆ ಒದ್ದಾಡುತ್ತಿದ್ದರೆ
ಹೆಂಡತಿ ರಾತ್ರಿಯಿಡೀ ಬಿಸಿಯುಸಿರು ಬಿಡುತ್ತಿದ್ದಳು.

ಗಂಡನ ಒದ್ದಾಟ
ಹಗಲಿನಾಟಕೆ ನಾಂದಿಯಾಡಿತು;
ಹೆಂಡತಿಯ ಬಿಸಿಯುಸಿರು
ಪಕ್ಕದ ಮನೆ
ತರುಣನ ಎದೆಗೆ ಬಡಿಯಿತು.

ಈಗ ಕತ್ತಲೆ ಇಬ್ಬರಿಗೂ
ತಂಪು ನೀಡುತ್ತಿದೆ,
ನಿದ್ರೆ ಬರುತ್ತಿದೆ.

# ಬಸುರಿ ಮರ

ಆನೆಗಾತ್ರದ ಕಾಂಡ
ಹೊತ್ತು ನಿಂತ ಬಸುರಿ ಮರ
ರಾತ್ರಿ ಕತ್ತಲಲ್ಲಿ ತೂಗಿ ತೂಗಿ
ನರಳುತ್ತದೆ, ಕರೆಯುತ್ತದೆ.

ಆಕಾಶನೋಡಿ ನಕ್ಷತ್ರ ನೆನೆದು
ಎದೆಹಾಲು ತೊಟ್ಟಿಕ್ಕುತ್ತದೆ.

ಕತ್ತಲಲ್ಲಿ ಪಕ್ಕದಲ್ಲೆ ಹೊರಳಿದ
ಇವಳು ನಗುತ್ತಾಳೆ
ನಕ್ಷತ್ರಗಳ ಕರೆಯುತ್ತಾಳೆ.

ಕತ್ತಲು ಬೆಳೆಯುತ್ತದೆ,
ಬಸುರಿ ಮರ ತೂಗುತ್ತದೆ.

ಮನೆಯ ಸೂರಲ್ಲಿ ಕುಳಿತ
ಪಕ್ಷಿ ಇದ್ದಕ್ಕಿದ್ದಂತೆ ರೆಕ್ಕೆ
ಬಡಿದು ಎದೆ ನಡುಗಿಸುತ್ತದೆ.

# ಭೂಮಿ ದುಃಖ

ಅವ್ವ....ಅವ್ವಾ.......
ಹಕ್ಕಿ ಅಳುತ್ತಾ ರಾತ್ರಿಯಿಡಿ
ಹುಡುಕುತ್ತಿದೆ.

ಅದಕ್ಕೆ ಇಲ್ಲೇನು ಸಿಗುತ್ತದೆ?

ಲೋಕವೆಲ್ಲ ಕತ್ತಲಾಗಿರುವಾಗ
ದೂರದ ಮಿನುಗು ನಕ್ಷತ್ರ
ತಾನೆ ಆಸೆ ಚಿಗುರು!

ಅದಕ್ಕೇ
ಅದು ತಲೆ ಎತ್ತಿ ನಕ್ಷತ್ರ ನೋಡಿ
ರೆಕ್ಕೆಯಲ್ಲಿ ಎದೆ ಬಡಿದು
ಭೂಮಿ ದುಃಖವನ್ನು
ಹಾಡುತ್ತಿದೆ.

# ಸಾವು-೧

ಸಾವು ಅಂದು
ತನ್ನ ಕರಿಯ ಕತ್ತಿ
ಎದೆ ಬಿರಿವ ತಮಟೆ ಸದ್ದಿನಿಂದ
ತನ್ನ ಕೊಯ್ಯಲನ್ನು
ಚಲಾಯಿಸಿತ್ತು.

ನಾನು ಬರೀ ನಕ್ಕಿದ್ದೆ ಅಷ್ಟೆ.
ಆದರದು ನಗಲಿಲ್ಲ!

ಆದರಿಂದು-
ನನ್ನ ಪುಟ್ಟ ಮನೆಯ ಸೂರಿನಲ್ಲಿ
ಮತ್ತೆ ಅದನ್ನು ಕಂಡೆ.
ವ್ಯತ್ಯಾಸ ಇಷ್ಟೆ:
ಅದು ಇಂದು ಜಡಿ ಮಳೆಯಿಂದ
ನೆನೆನೆನೆದು ಕೆಸರಾದ ಹೂನಲುನೆಲ.

ಇಂದು ನಾನು ನಗುತ್ತಿಲ್ಲ
ಆದರದು ನಗುತ್ತಿದೆ!

# ಸಾವು-೨

ನನ್ನ ಸಾವು ಕಾದಿದೆ
ಬೀಳುತ್ತಿರುವ ಹಳದಿ ಎಲೆಗಳ ಮರೆಯಲ್ಲಿ;
ಮಾಂತ್ರಿಕನ ಗೂಢ ಬೆರಳುಗಳಲ್ಲಿ.

ನನ್ನ ಸಾವು ಕಾದಿದೆ
ಜೋಡಿ ಹಾಸಿಗೆಯಲ್ಲಿ
ನನ್ನ ವಿಸ್ಮೃತಿಯ ತಲೆಯಲ್ಲಿ.

ಒಂದೊಂದೇ ಹಾಳೆ ಮಗಚುತ್ತಿದೆ,
ಸರಿಯುತ್ತಿರುವ ಕಾಲದ ಜೊತೆಯಾಗಿ.

ಆದರೂ ನಾನು
ಶಾಂತ ನಿಶ್ಚಿಂತ!

# ಸಾವು-೩

ಸಾವುಗಳು ಹತ್ತು ಹಲವಾರು ದಾರಿಗಳಲ್ಲಿ
ಬರುತ್ತವೆ.

ಕೆಲವು ಸಾವುಗಳು
ಅನಿರೀಕ್ಷಿತ ಅನಪೇಕ್ಷಿತ
ಸಿಡಿಲ ಹೊಡೆತದಿಂದ ಬಂದು
ದಿಗಿಲು ಹುಟ್ಟಿಸುತ್ತವೆ, ಮರವಟ್ಟಿಸುತ್ತವೆ.

ಕೆಲವು ಸಾವುಗಳು
ಎಚ್ಚರದಿಂದ ಚುಚ್ಚುತ್ತಾ
ನಿಧಾನವಾಗಿ
ಪದರ ಪದರ ಮುಟ್ಟಿ
ಅರಿವು
ಚರ್ಮಾಂಗ ಮರ್ಮಾಂಗಗಳಲ್ಲಿ ಸಂಚರಿಸಿ
ನರಳಿಸಿ ನರಳಿಸಿ
'ಸಾಕು ಮಾಡಪ್ಪ ಈ ದೇಹವ' ಎಂದೆನ್ನಿಸಿ
ಬಂದೆರಗುತ್ತವೆ.

ಕೆಲವು ಸಾವುಗಳು
ಯಾವುದೋ ವರಪ್ರಸಾದ ಫಲ;
ಬಿಡುಗಡೆಯ ಆನಂದ ತುಂಬಿಸಿ
ಗೊತ್ತಾಗಿಯೂ ಗೊತ್ತಿಲ್ಲದಂತೆ
ಕರೆದುಕೊಂಡು ಹೋಗುತ್ತವೆ.

ಮತ್ತೆ ಕೆಲವು ಸಾವುಗಳು
ರೋಗ ಬರಸದೆಯೂ ಸಾಯಿಸದೆಯೂ
ಇನ್ನೊಬ್ಬರ ಜೀವಸತ್ತ್ವ ಹಿಂಡುತ್ತಾ
ಎಲ್ಲವನ್ನು ಸಾಯಿಸುತ್ತಾ ಸಾಗುತ್ತವೆ;
ಸುತ್ತ ನರಕ ಸೃಷ್ಟಿಸಿ,
ಅದರಲ್ಲಿ ಖಳನಗೆ ನಗುತ್ತಾ
ಮರವ ಜೊಳ್ಳು ಮಾಡುತ್ತಾ
ನಿರಂತರ ಚಿರಂಜೀವಿಗಳಂತೆ
ಕುರುಚಲು ಗಡ್ಡ ನೀವುತ್ತಾ
ನರಿನಗೆಯ ನಗುತ್ತಾ ಇರುತ್ತವೆ.

ಎಲ್ಲೋ ಕೆಲವು ಸಾವುಗಳು
ಅತ್ಯಂತ ಸ್ವಾಭಿಮಾನದಿಂದ,
ಜೀವಕ್ಕೆ ಗೌರವ ತೋರಿ
ಸುತ್ತ ಮುತ್ತ ಸ್ನೇಹ ಬಯಸಿ
ಸಂತೃಪ್ತಿಯಿಂದ ಕಣ್ಣು ಮುಚ್ಚಿಸುತ್ತವೆ.

# ನಾನು ಸಾಯಲೇ ಬೇಕಾಗಿ ಬಂದರೆ

ನಾನು ಸಾಯಲೇ ಬೇಕಾಗಿ ಬಂದರೆ
ಸಾಯುವ ಮುನ್ನ
ಈ ಸುಂದರ ನದಿವನ, ಪ್ರಾಣಿಪಕ್ಷಿ ಮಾನವ ಕೋಟಿ
ಮುಗ್ಧ ನಿರಾಡಂಬರ ನಗೆಯನ್ನು
ನೋಡ ಬಯಸುತ್ತೇನೆ.

ನಾನು ಸಾಯಲೇ ಬೇಕಾಗಿ ಬಂದರೆ
ಸಾಯುವ ಮುನ್ನ
ನೋವು ನರಳಾಟಿಕೆಯನ್ನು ಕ್ಷಣಕಾಲವಾದರೂ
ಮರೆತು ನನ್ನಜನ ನಗುವಂತೆ
ಮಾಡಬಯಸುತ್ತೇನೆ.

ನಾನು ಸಾಯಲೇ ಬೇಕಾಗಿ ಬಂದರೆ
ಸಾಯುವ ಮುನ್ನ
ಇತಿಹಾಸದ ಗರ್ವಿಷ್ಟಪರಂಪರೆ ಸತ್ತು
ಚಲ್ಲಾಪಿಲ್ಲಿಯಾಗುವುದನ್ನು
ಕಾಣ ಬಯಸುತ್ತೇನೆ.

ಆಗ ನಾನು ಸಾಯುವುದರಲ್ಲು
ಆನಂದ ಕಾಣುತ್ತೇನೆ.

# ಹುಡುಕಾಟ

ನಾನು ಯೋಧನಾಗಿದ್ದಾಗ
ಪರಮಣ್ಣಿನಲ್ಲಿ ನಿನಗಾಗಿ ಕಾದಿದ್ದೇನೆ.

ನಾನು ಪ್ರೇಮಿಯಾಗಿ
ನಿನ್ನ ಕಣ್ಣುಗಳ ಹಿಂದೆ ನನ್ನ ತಡಕಿದ್ದೇನೆ:
ತಕ್ಷಣ ಅಲ್ಲಿ ಬೇರೊಂದು ರೂಪು
ಕಂಡು ಬೆರಗಾಗಿದ್ದೇನೆ.

ಸತ್ಯ ಹೇಳುತ್ತೇನೆ: ಇದು ಅಪ್ಪಟ ಮೋಸ!

ಕೆಲವೇ ಕೆಲವು ಕ್ಷಣ ನಾನು
ಅಚ್ಚರಿಪಡುತ್ತೇನೆ:

'ನೀನು ಎಂದಾದರೂ ನನ್ನ ನೆನಪಿಸಿಕೊಳ್ಳುತ್ತೀಯಾ'

# ದೇವತೆಗಳು

ಕನಸುಗಳೋ
ರಂಬೆ ಊರ್ವಶಿಯರಂತೆ
ಬೆಳಕಿನಲ್ಲಿ ನರ್ತಿಸಿ
ಕತ್ತಲನ್ನು ದಡದಲ್ಲಿಡುತ್ತವೆ-
ಪ್ರೀತಿಯನ್ನು ಕಣ್ಣೆದುರಿಟ್ಟು.

ಆದರೆ ಕಾಲ ಬದಲಾಗುತ್ತದೆ.

ಕನಸುಗಳು
ದೇವತೆಗಳಂತೆ ಶಾಶ್ವತವಾಗಿ
ಅಜ್ಞಾನದ ದೀವಟಿಗೆಯ
ಸದಾ
ರಾತ್ರಿಯೆಲ್ಲಾ ಉರಿಸುತ್ತವೆ.

# ಮನೆ

ನನ್ನಾಸೆ:
ಆಕಾಶದೆತ್ತರಕ್ಕೆ ಹಾರಬೇಕು,
ಪಕ್ಷಿಯಂತೆ ಹಾರಿ ತುಸು ತುಸು
ನನ್ನ ಮನೆಯ ಬಳಿ ಸೇರಬೇಕು.

ಕೆಲವು ವೇಳೆ ನನಗನ್ನಿಸುತ್ತದೆ-
ಸ್ವಾತಂತ್ರ್ಯ ಬಂದೇ ಬಿಟ್ಟಿತು
ಇಲ್ಲವೇ
ಸ್ವಾತಂತ್ರ್ಯದೊಳಗೇ ಇದ್ದೇನೆಂದು!

ಆದರೆ ನಾನು ನನ್ನ ಮನೆಯಿಂದ
ಬಲು ದೂರವಿದ್ದೇನೆ.

ಕೆಲವು ವೇಳೆ ನನಗನ್ನಿಸುತ್ತದೆ-
ನನ್ನ ಹೋರಾಟದ ರಾಜ್ಯ ಕೈಯಲ್ಲೇ ಇದೆಯೆಂದು!

ಆದರೆ ನಾವು ನಮ್ಮ ಮನೆಗಳಿಂದ
ಬಲುದೂರವಿದ್ದೇವೆ.

ನಾನು ತಾಯಿಯಿಲ್ಲದ ತಬ್ಬಲಿಯಾಗಿದ್ದೇನೆ,
ನಾನು ತಾಯಿಯಿಲ್ಲದ ತಬ್ಬಲಿಯಾಗಿದ್ದೇನೆ.

ದೂರ ಬಲುದೂರವಿದೆ ನನ್ನ ಮನೆ!

# ಕಳಚಿ ಬೇಕಿದೆ ದೃಷ್ಟಿಗಡ್ಡವಿರುವ ಬಟ್ಟೆ

ಆಗಲೂ ಆಕಾಶದಲ್ಲಿ ನಕ್ಷತ್ರಗಳು ನಕ್ಕು
ಮಿನುಗುತ್ತಿದ್ದವು,
ಮರಗಿಡಬಳ್ಳಿಗಳಲ್ಲಿ ಹೂ ಅರಳಿ ಸುಖ
ಚೆಲ್ಲುತ್ತಿದ್ದವು,
ಹಕ್ಕಿಗಳು ಕುಣಿದು ನಲಿದು ಇಂಪಾಗಿ
ಉಲಿಯುತ್ತಿದ್ದವು;
ಬಟ್ಟೆ ಧರಿಸದ ಮಾನವ
ಎಲ್ಲವನ್ನು ಅರ್ಥಮಾಡಿ ಕೊಳ್ಳುತ್ತಿದ್ದ,
ಮಾತು ಬಾರದಿದ್ದರೂ ಸಂವಾದಿಸುತ್ತಿದ್ದ;
ಎಲ್ಲವೂ ಅವನೇ ಆಗಿದ್ದ.

ಈಗಲೂ ಆಕಾಶದಲ್ಲಿ ನಕ್ಷತ್ರಗಳು
ಮಿನುಗುತ್ತವೆ
ಮರಗಿಡಬಳ್ಳಿ ಹೂವು ಹಕ್ಕಿಗಳ ಚಿಲಿಪಿಲಿಗಾನ
ಎಲ್ಲಾ ಹಾಗೆ ಇದೆ.

ಆದರೆ
ಬಟ್ಟೆ ಧರಿಸಿದ ಮಾನವ
ಕಣ್ಣಿದ್ದೂ ಕುರುಡ ಕಿವಿಯಿದ್ದು ಕಿವುಡ
ಮಾತು ಬಂದರೂ ಮೂಗ,
ಪ್ರಕೃತಿ ದೂರ ಬಹುದೂರ;
ಸಂವಾದ ಸೊನ್ನೆ.

ಇನ್ನಾದರೂ ಕಳಚಬೇಕಿದೆ
ದೃಷ್ಟಿಗಡ್ಡವಿರುವ ಬಟ್ಟೆ
ನಾಶವಾಗುವ ಮುನ್ನ ಹುಡುಕಬೇಕಿದೆ
ಕಳೆದು ಹೋಗಿರುವ
ಪ್ರಕೃತಿ ಸಂವಾದ ಜೀವಾತ್ಮ.

ಇಲ್ಲದಿದ್ದರೆ ಬಾಳು
ಬರೀ ತೊಗಟೆ, ಬಿಸಿಬೀರುವ
ಡಾಂಬರು ರಸ್ತೆ
ಅರ್ಥವಿಲ್ಲದ ಪಯಣ.

# ಅರಮನೆ ಸೆರೆಮನೆಗಳಿಲ್ಲದ ಬಾಳು

ನೇಸರ,
ನಿನ್ನೆ ನನ್ನ ಬದುಕು ಕಾರ್ಮೋಡ
ಜಡಿಯ ತವರು
ಮೈಯೆಲ್ಲಾ ಸುಕ್ಕು
ಒಡೆದ ಜಾಗದಲ್ಲಿ ನೆತ್ತರು;
ಬೆಂಕಿ ಮುಂದೆ ನಿಂತು ಕಾಯಿಸಿಕೊಂಡರೂ
ಹಿತವಿಲ್ಲ.
ಬೇಕು ಬೇಕು ಸಹಜ ಬಿಸಿಲು
ಬೇಕು ಬೇಕು ಭೂಮಿಗರ್ಭಕಾವ್ಯ,
ಕೀಳ ಬೇಕು ಕಟ್ಟು, ಹತ್ತಬೇಕು ತಿಟ್ಟು,
ಸಾವಿರ ಸಾವಿರ ಮೈಲು ದೂರ
ಇದೇ ಪಯಣ ಇದೆ ಪಯಣ.

ನೇಸರ,
ಇಂದು ನೀನು ನನ್ನ ನೋಡಿ ನಕ್ಕಾಗ
ಹಗುರಾಯಿತು ಎದೆಯ ಮೇಲಿನ ಹೊರೆ
ನೋವಿನ ಪೊರೆ
ನಗುತ್ತಿವೆ ತೆಂಗುಗರಿ ಹಸಿರು ಎಸಳು
ಭೂಗರ್ಭಸೀಳಿ ಕುಡಿ ಮೂಡಿದ ಕಾವ್ಯ
ಆಕಾಶದೆತ್ತರಕ್ಕೆ ಬೆಳೆವ ಕನಸು
ಎಂಥ ಸವಾಲು?
ಅರಮನೆ ಸೆರಮನೆಗಳಿಲ್ಲದ ಬಾಳು;
ನಂಬಿಕೆ ಪ್ರೀತಿಗಳೆ ಬಾಳ ಬಟ್ಟೆ.

ಆದರೂ
ಹತ್ತಬೇಕಿದೆ ಸಾವಿರ ಮೆಟ್ಟಿಲು
ಗಂಧರ್ವಗಿರಿಯ ಫಲವ ಕೀಳಲು.
ಎದೆಯಲ್ಲಿ ಮೂಡಿದ ಸ್ವಾಭಿಮಾನ
ಭರವಸೆಯೊಂದೇ ಸಾಕು!
ಒಂದು ಹೆಜ್ಜೆ ಎರಡಾಗಿ, ಎರಡು ನಾಲ್ಕಾಗಿ.........
ಹೀಗೆ ಹೀಗೆ ಸಾಸಿರ ವಜ್ರ ಕಂಭವಾಗಿ
ಮುಟ್ಟುತ್ತೇನೆ, ದವಳಗಿರಿ!

ನೇಸರ,
ಆಗ ಕತ್ತಲ ದಿನಗಳು
ದೂರಾಗಿ
ಬೆಳಕು ನಗೆ ಚೆಲ್ಲುತ್ತದೆ.

# ಚಳಿಗಾಲದ ಹೂವುಗಳೆ

ಏಕಿಷ್ಟು ಅವಸರ
ನಿಮಗೆ
ಚಳಿಗಾಲದ ಹೂವುಗಳೆ?
ಬೇಗ ಬಂದು ಬೇಗ ತೆರಳುವ
ಚೆಲುವಿನ ಗಣಿಗಳೆ?

ಒಮ್ಮೆ ಸುತ್ತ ನೋಡಿ
ಎಂಥ ನೀರಸ ಬದುಕು!
ಎಲೆ ಉದುರಿ ನಿಂತ ಅನಂತ
ಮರ ಕೋಟಿ
ದುಃಖ ದುಮ್ಮಾನ ಬಿಸಿಯುಸಿರು;
ಪಾಲುಗೊಳ್ಳಿ ನೋವಿನಲ್ಲಿ
ಕಣ್ಣೀರೊರಸಿ ಸಂತಾಪದಲಿ.

ಎಲ್ಲಾನರಳುವಾಗ, ಮುಪ್ಪಿನ
ಕಣ್ಣು ಮಂಜಾದಾಗ
ನಿಮ್ಮ ನಗು ನಿಮ್ಮ ನಲಿವು
ನೋವ ಹೆಚ್ಚಿಸುತ್ತದೆ-
ಸೋದರರಲ್ಲಿ ಬಂಧು ಬಾಂಧವರಲ್ಲಿ.

ಸ್ವಲ್ಪ ಯೋಚಿಸಿ ಚೆಲುವಿನ
ಗೆಳೆಯರೆ,
ನೀವು ಬಾಡಿ ಹಸಿರು ಬಲಿತು
ನಿಂತಾಗ

ಕಣ್ಣರಳಿಸಿ ಒಮ್ಮೆ ನೋಡಿದ್ದೀರಾ?
ಸುತ್ತ ಬದುಕು ಎಂಥ ಚಿಗುರು!
ಬಯಲು ಬಯಲೆಲ್ಲ ಹೂವು
ಗಂಧ ಗಂಧರ್ವ ಲೋಕ!
ನೀವು ಮಾತ್ರ ಮತ್ತೆ ಒಂಟಿ
ಇಂದಿನಂತೆ ಅಂದಿಗೂ.

ಚಳಿಗಾಲದ ಹೂವಿಗಳೆ
ಏಕಿಷ್ಟು ಅವಸರ?
ಚಳಿಯ ಕೊರೆ
ಕೊಳೆಯಿಸುವುದು ಬೇಗ;
ಬರಲಿದೆ ವಸಂತ ಕೂಗಲಿದೆ ಕೋಗಿಲೆ
ಅರಳಲಿದೆ ಪಚ್ಚೆ ಕೋಟಿ.
ಆಗ, ನೀವು ಅರಳಿ ನಿಂತರೆ
ಎಂಥ ಸಂತೋಷ!
ಎಂಥ ಸಮಾನತೆ!

# ನಗಬಹುದು ನೊಂದ ಜೀವ

ಸ್ವಿಟೇನಿಯಾ ಮಹಾಗನಿ ಮರವನ್ನು
ನೋಡಿದ್ದೀರಾ? ಕಂಡಿದ್ದೀರಾ?
ಅದು ನಮ್ಮ ಬೇವಿನ ಸೋದರ
ಮಾವನೋ ದೊಡ್ಡಪ್ಪನೋ ಇರಬೇಕು.

ನವೆಂಬರ್ ಡಿಸೆಂಬರ್ ತಿಂಗಳಲ್ಲಿ ಕಡು
ಹಚ್ಚ ಹಸಿರ ಹೊತ್ತ ಸೊಂಪಾದ ಮರ;
ಮಳೆಮೋಡ ಕಳೆದುಕೊಂಡ ಆಕಾಶದ
ನೀಲಿ ಲೀಲೆಯಲ್ಲಿ ಮರಮರದ ಎಲೆಎಲೆಗೆ
ಎಂಥ ದುಃಖ?
ಕಡು ಹಚ್ಚ ಹಸಿರು ಯಾವುದೋ ನಿಗೂಢ
ಮೋಡಿಗೆ ಸಿಕ್ಕಿ ಒಂದೇ ದಿನಕ್ಕೆ
ಹಳದಿಯಾಗುವ ಬದುಕು!

ಒಂದೇ, ಎರಡೆ, ಮೂರೆ-ಅಲ್ಲ
ಮರಕ್ಕೆ ಮರವೇ ಮುದಿಯಾಗಿ
ಯೌವ್ವನದ ನೆನಪಲ್ಲಿ ಒಂದೇ ದಿನಕ್ಕೆ
ಕುಸಿದು ಭೂಮಿಗೆ ಬೀಳಿಸುತ್ತದೆ
ಎಲೆಗಳನ್ನ!

ಮಳೆಯಿಲ್ಲದೆ ಒಣಗಿ ಬಿರುಕು ಬಿಟ್ಟ ಭೂಮಿ;
ಮರದ ಬುಡದಿಂದ ಮೇಲು ನೋಟಕ್ಕೆ
ಮರವೆಲ್ಲ ಬರಡು-ಸಾವಿರಾರು ಕೊಂಬೆಗಳ
ಒಣ ಉಸಿರು.

ಚಿಗುರ ಬಹುದೆ ಮತ್ತೆ ಮರ?
ಒಣಗಿ ಬಿರುಕು ಬಿಟ್ಟ ಭೂಮಿ ಮತ್ತೆ
ದಾಹ ಹಿಂಗಿ ಹಸಿರಾಗುವುದೆ?
ಆಕಾಶನೋಡಿ ನೋವಾದ ಕತ್ತು
ಭೂಮಿ ಉತ್ತು ಬೆಂಡಾದ ಮೈ
ತುಂಬಿ ನಗುವಿನ ಚಿಗುರೊಡೆಯುವುದೇ ಮತ್ತೆ?

ಸ್ವಿಟೇನಿಯಾ ಮಹಾಗನಿ ಮರವನ್ನು
ಕಂಡಿದ್ದೀರಾ? ನೋಡಿದ್ದೀರಾ?

ಬರಲು ಬರಲಾಗಿ ಒಣಗಿ ನಿಂತಿದ್ದ
ಮರ ಒಂದೇ ದಿನಕ್ಕೆ ಧುತ್ತನೆಂಬಂತೆ
ಕೊಂಬೆ ರೆಂಬೆಯ ಕೀಲುಗಳಲ್ಲಿ ಎಂಥ
ಕೆಂಪನೆಯ ಚಿಗುರ ಕೆತ್ತುವುದು?

ಎರಡು ಮೂರು ದಿನಕ್ಕೆ ಕೆಂಪು
ತೆಳು ಹಸುರಾಗಿ ಕಂಗೊಳಿಸುವುದು
ಎಷ್ಟು ಚಂದ!
ಹಸಿರು ಟಿಸಿಲ ಮಧ್ಯೆಯೇ ಸುಗಂಧ ಪುಷ್ಪ!
ಹೊಸಬಾಳ ಆಸೆ ಹೊತ್ತ ಜೀವದತ್ತ
ಮುಗಿಲಕಡೆ ನೋಡಿ ತೂಗುವ
ಎಲೆ ಹೂವು ಕೊಂಬೆ ರೊಂಬೆ!

ಬರಬಹುದು ಮಳೆ ಆಗಬಹುದು ಬೆಳೆ
ನಗಬಹುದು ನೊಂದ ಜೀವ
ಏಕೆಂದರೆ,

ಸ್ವಿಟೇನಿಯಾ ಮಹಾಗನಿ ಮರವನ್ನು
ಕಾಣಿರಿ, ನೋಡಿರಿ;
ಅದು ನಮ್ಮ ಬೇವಿನ ಸೋದರ
ಮಾವನೋ ದೊಡ್ಡಪ್ಪನೋ ಆಗಿದೆ.

# ಇವಳು-ಅವಳು

ಇವಳು ನನ್ನ ಮಕ್ಕಳ ತಾಯಿ
ಹೂಬಿಟ್ಟು ಪುನೀತ ಫಲ ಕೊಟ್ಟು
ತೊಟ ತೊಟ ರಸವುಕ್ಕಿಸಿ ನಲಿವು ನೀಡಿದ
ಶಾಂತೆ-ಶಾಂತ ಗಂಭೀರ ಭೂದೇವಿ.

ಅವಳು ನನ್ನ ಮನದ ಆವೇಶದ ಮೂರ್ತಿ
ಮುಟ್ಟಿದೆಡೆಯೆಲ್ಲಾ ಹೂಬಿರಿಯುವ ಕಾರಂಜಿ
ಮೈಮೂಳೆ ಮುರಿದು ದುಡಿದು ದಣಿದ ತೃಪ್ತ ಅನುಭವದಗಣಿ
ಬೆಟ್ಟದಾಸೆಯ ತಲೆಯಲ್ಲಿ ಮೂಡಿಸುವ ರತಿದೇವಿ.

ಇವಳು ಗೌರಿಕಾಲದ ತೆನೆ ಕಟ್ಟುವ ರಾಗಿ ಪೈರು
ವರ್ಷವೆಲ್ಲ ಕಾದು ನಿಂತಿದೆ ಇವಳ ಸುಗ್ಗಿಗೆ
ಮಾಗಿ ಕಳೆದು ಬರುವ ಬಿಸಿಲು ಕೂಡ ನಗುತ್ತದೆ-
ಇವಳ ದನಿಗೆ, ಮಿಡುಕುತ್ತದೆ ಇವಳ ಮೋಡಿಗೆ.

ಅವಳು ವಸಂತದ ಮುಗಿಲ ಮಾಲೆ
ಬಂದರೆ ಬಂತು ಇಲ್ಲದಿರೆ ಇಲ್ಲ ಮಳೆ
ಆದರೂ ಅದರ ನೆನಪು ಎಷ್ಟು ಚೆಂದ!
ಗಿಡಗಿಡ ಮರಮರ ಹೂಹಸಿರು ಹೊತ್ತ ಪ್ರಕೃತಿ ಬಸಿರು.

ಇವಳು ನನ್ನ ಸಂಕಟದ ಸ್ನೇಹಿತೆ
ಆಗಾಗ್ಗೆ ಮಿಡಿಯುವಳು ಹೂ ಮುತ್ತು ಕಣ್ಣೀರು
ಮಕ್ಕಳೊಂದಿಗೆ ನನ್ನನೂ ಮಗು ಮಾಡಿ ಸಾಕುವ ತಾಯಿ
ಯಾರಿಗೆ ಕಡಿಮೆ ಈ ನನ್ನ ಮಡಿಲ ಮಾತೆ?

ಅವಳು ಸುಖದ ನೆನಪು ಸಂಕಟದ ಸತ್ಯ
ಜಾತಿಧರ್ಮ ಸಮರದ ಇಕ್ಕಟ್ಟಿನ ನೆವತದ ಗುರಿ
ಯಾರಿಗೆ ಬೇಕು ಪ್ರೇಮ?
ಸದಾ ವಿರಹದ ಬಿಸಿಉಸಿರು, ಕೂಡಲಾರದ ರೈಲು ಕಂಬಿ.

ಇವಳ ಕಣ್ಣಲ್ಲಿ ಅವಳ ಸಂಕಟದುಸಿರು
ಅವಳ ನಗುವಿನಲ್ಲಿ ಇವಳ ಮಾತೆಬಸಿರು-
ಹುಡುಕ ಹೊರಟ ಬಿಸಿಲ್ಗುದುರೆ ಸರದಾರ
ನಾನು ನಗರಾರಣ್ಯದ ಸದ್ದುಗದ್ದಲದಲ್ಲಿ ಐಕ್ಯವಾದ ಹುಸಿಗಂಭೀರ.

# ನೇಸರ

ಇವ ನೇಸರ
ಇಡಿ ನಮ್ಮ ಮನೆ ಇವನಿಂದ ಬೆಳಕಿನ
ಮಹಾಪೂರ-ಇಲ್ಲವೆ
ಏಳು ಸಮುದ್ರದ ಒತ್ತಡ, ದುಃಖದ ಭಾರ.

ನೇಸರನ ಬರಿ ಬಿಸಲೆ ಸಾಕೆ?
ಮೋಹದ ಮರೆಯ ಅವನ ಕಣ್ಣುಮುಚ್ಚಾಲೆ
ಆಟ ಬೇಕೆ?
ಗ್ರೀಷ್ಮದುರಿಯ ಕೆಂಡಕೆಂಡತಾಪ ಬೇಡವೆ?

ಮೋಡ ಮುಸುಕಿ ಜಗತ್ತೆಲ್ಲ ಕತ್ತಲೆಯಲ್ಲದ
ಕತ್ತಲು.
ಎಲ್ಲಿ ಹೋದೆ ನೇಸರ? ನಿನ್ನ ನಗುವ ನಗು
ಬಾ ನೇಸರ.
ಹಗಲು ರಾತ್ರಿಗಳ ಒಂದು ಮಾಡಿ
ತೊಟತೊಟ ತೊಟ್ಟಿಕ್ಕುವ ಹೆಮ್ಮಾರಿ
ದುಃಖಮಳೆಯ ಹೊಡೆದೋಡಿಸು ಬಾ.

ನಿನ್ನ ನಗು ಕಿರಣವಿಲ್ಲದೆ ನೋಡು-
ಸೊರಗಿವೆ ಪಚ್ಚೆಪೈರು
ಬಣ್ಣ ಕೂಡ ಕಳೆದು ಕೊಂಡಿದೆ ಜೀವಧಾತು ನೀರು
ತಾಯ ಹಾಲು ಕೂಡ ಗಟ್ಟಿಯಾಗಿದೆ
ಒಮ್ಮೆ ನಕ್ಕು ಕಣ್ಣಬೆಳಕು ತೋರು.

ಇವ ನೇಸರ
ನಮ್ಮ ಬದುಕಿನ ಮಧುರ ಸೇತು
ಇವನಿಲ್ಲದ ಜಗತ್ತು ಬರೀ ಕನಸು
ಇವನಿಂದ ನಮ್ಮ ಮನೆಗೆ ಬೆಳಕಿನ
ಮಹಾಪೂರ-ಆಗ ಇಳಿವುದು ಎದೆಯ ಮೇಲಿನ
ಏಳು ಸಮುದ್ರದ ಒತ್ತಡ, ದುಃಖದ ಭಾರ.

# ಗುರಿ

ಅರ್ಥಮಾಡಿಕೊಳ್ಳುವುದು ಕಷ್ಟ
ಇವರನ್ನ:

ಅಪ್ಪ ಬಿರುಗಣ್ಣಿನಲ್ಲಿ ಶಿಸ್ತುಹೇರುವ ಸಿಪಾಯಿ,
ಅಮ್ಮ ಪ್ರೀತಿ ವಾತ್ಸಲ್ಯಗಳಲ್ಲೇ ಮೈಸವರಿ
ಬುದ್ದಿ ಹೇಳುವ ನಯಗಾರ್ತಿ;
ಗುರು ದೇಶಕ್ಕಾಗಿ ಕೊಲ್ಲು ಇಲ್ಲ ಮಡಿ
ಅಂದರೆ-

ಇವಳು ಅರ್ಥ ಮಾಡಿಕೊಂಡಳೆ ನನ್ನ !?

ನಾನು ಬದುಕುವುದು ಸವಿ
ಸವಿದು ನಗುವುದು ಇವಳಿಗೆ ಬೇಕು:
ಯುದ್ಧಮರೆ, ಧರ್ಮಮರೆ
ಸುಮ್ಮನೆ
ಪ್ರೀತಿಸು ಪ್ರೀತಿಸು ಪ್ರೀತಿಸು ;
ಹೆಣಗಳ ಹಾಸು ತರುವುದಿಲ್ಲ ಸುಖ
ಪ್ರಕೃತಿ ಕೆಚ್ಚಲನ್ನು
ಸೇರು-ಹೀರು
ಮರಗಿಡವಾಗಿ ಚಿಗುರು
ನದಿಯಾಗಿ ಹರಿ
ಸಾಗರದಲ್ಲೊಂದಾಗು.

ಏನು ಹೇಳಲಿ ನಾನು?
ಕೊನೆಗೂ ಅರ್ಥವಾದಳಲ್ಲ ಇವಳು-
ನನ್ನ ಜೀವಹಿಡಿದು ನಡೆಸುವವಳು.

# ಕರೆ-ಐಕ್ಯ

ಅರಳಿರುವ ಒಂದೊಂದು ಹೂವು
ಸುರಿಸುವ ಕಣ್ಣೀರು;
ನೆಲಕ್ಕಾಗಿ ಜೀವದುಸಿರಿಗಾಗಿ
ಬಿದ್ದಾಗ ಆತುಕೊಳ್ಳುವ
ಕೈಗಳಿಗೆ ಕೋಟಿ ಸಾರ್ಥಕ್ಯ.

ಒಮ್ಮೆ ನಕ್ಕು ಕಣ್ಣೀರ ಮರೆಯಲ್ಲಿ
ನೋಡುವ ನೋಟವಾಯಿತು ಇಳೆಯ
ಮಕ್ಕಳ ಮೈತುಂಬ ಪುಳಕ !
ಆಗ ಹರಿಯುತ್ತಾಳೆ ಸಾಕ್ಷಿಯಕ್ಕ ವಾರಿ
ಮನದಾಳಕ್ಕೆ ರಕ್ತ ಸೇರಿ.

ಗಿಣಿ ಕೂತು ಕರೆಯುತ್ತದೆ:
ಬನ್ನಿರೋ ಬನ್ನಿರೋ ನೋಡಿರೋ ನೋಡಿರೋ
ಕೋಗಿಲೆ ಪ್ರೀತಿ ತುಂಬಿ ಹಾಡುತ್ತದೆ:
ಕಾಣಿರೋ ಕಾಣಿರೋ ದಣಿವಾಗುವ ತನಕ
ಕುಡಿಯಿರೋ ಕುಡಿಯಿರೋ.

ಆಗ ಜೀವ ಜಂತು
ತಲೆ ಎತ್ತಿ ಕಿವಿ ನಿಮಿರಿಸಿ
ಸಹಸ್ರ ಕಣ್ಣ ತೆರೆದು ಜೀವ
ಕರೆಯಲ್ಲಿ ತನಗೆ ತಾನಾಯಿತು.

# ಕರೆ-ಮಣ್ಣು

ಎತ್ತ ಹಾಯಿಸಿದರೂ ಕಣ್ಣು
ಸಸ್ಯ ಪ್ರಾಣಿ ಪಕ್ಷಿ ಜೀವ ಜಗತ್ತು
ಹೆತ್ತು ಹೊತ್ತು ಪ್ರೀತಿ ಕರೆವ ತಾಯಿ!

ಹಾಲು ಕುಡಿಸಿ ನಡೆಸಿ
ಬೆಚ್ಚಗೆ ಜೋಗುಳ ಹಾಡಿ ನಲಿದು
ಬಳುಕಿ ಬೆಳಸಿದವಳು.

ರೋಮದುದ್ದಕ್ಕೂ ಎದ್ದ ಕಿಚ್ಚು
ಹುಚ್ಚ ತೃಪ್ತಿ ಪಡಿಸಿ ನಿದ್ರೆ ತಂದ
ಮಾಧಕಾಂಗೆ ವಸುಂಧರೆ

ಕಂಕುಳಲ್ಲಿ ಕವಲೊಡೆದು
ಥೇಟ್ ನನ್ನಂತೇ ನಕ್ಕು ಅತ್ತು
ಜೀವ ಅಲ್ಲಾಡಿಸಿದ ಬಳ್ಳಿ

ಸಾಕು ಸಾಕೆನಿಸಿ
ಬಂದ ಒಂದೊಂದು ಪೊರೆ ಎಣಿಸಿ
ಕಣ್ಣು ಮಂಜು;

ಕೊನೆಯ ಮುಟ್ಟಿ ತಿರುಗಿ ಮತ್ತೆ
ನೆನಪಿನ ಬೂದಿ ಕೆದಕಿದಾಗ
ನಗೆಯ ಕೆಂಡ!
ಓ, ಬಂದು ಮುದ್ದಿಸಿ ಕರೆ-ಮಣ್ಣು!

# ನೆಹರು ನೂರು-ಒಂದು ವಿಷಾದಗೀತೆ

ನಿಶ್ಯಬ್ದದಲ್ಲಿ ನೆನಯಬೇಕಾದ ನಿನ್ನನ್ನೋ
ನಿನ್ನಂಥವರನ್ನೋ
ನಾವಿಂದು ನೆನೆಯುತ್ತಿದ್ದೇವೆ-ಶಬ್ದಮಧ್ಯದಲ್ಲಿ.
ಬಯಲಂತೆ ನಿಂತು ಬಯಲಂತೆ ಬೆಳೆದು
ಜನಮನದಲ್ಲಿ ಸದಾ ಬಯಲು
ಬಯಲಾಗಬೇಕಿದ್ದ ನೀನಿಂದು ಬರೀ ಆಕೃತಿ.

ಅಪ್ಪಾಗ ಬೇಕಿದ್ದವ ಇಷ್ಟಾಗಿದ್ದಿಯಲ್ಲ
ಗಾಂಧಿಶಿಷ್ಯನೆ, ಏನಾಯ್ತು?
ಗುರು ಕಲಿಸಿದ ಅಣು ಲೀನ ವಿದ್ಯೆ!?
ಹನಿಹನಿಗೂಡಿ ಹಳ್ಳವಾಯ್ತೆ?
ಇಲ್ಲ
ಬಳ್ಳವಾಯ್ತೆ?ಸಂತಾನದ ಕೊಳ್ಳವಾಯ್ತೆ?
ಏನು ಮೋಹ?
ಎಂಥ ಸೆಳೆತ?
ಕರಳು ಬಳ್ಳಿಯ ಬಿಗಿತ!
ನಿನ್ನ ಬಸಿರೊಳಗೆ ಚಿಗುರೊಡೆದ ಕೂಸು
ದೇಶಕ್ಕಾಯ್ತೆ ನಿನ್ನ ಬಂಧನದ ಕಾಣ್ಕೆ!
ಎಲೆ ಹಸಿರಂತೆ ಹೂವು ನವಿರಂತೆ
ಭೂಮಿಯೊಳಗೆ ಬೇರು ಬಿಗಿತ!
ಮರವಿಸ್ತಾರ, ಕೊಂಬೆ ಕೊಂಬೆ ತಲೆಮಾರು.

ನೀನು ಎಷ್ಟು ಕೊಟ್ಟಿದ್ದೋ ಅಷ್ಟನ್ನು
ಚಕ್ರಬಡ್ಡಿ ಸಹಿತ ಹಿಂತಿರುಗಿಸಿದ್ದೇವೆ,
ನಮಗೆ ಋಣವಿಲ್ಲ; ನಿನಗೆ ಋಣ

ಬೆಳೆಯುತ್ತಾ ಹೋಗುತ್ತದೆ, ಮುದುಕ:
ಬೆವರ ಋಣ ನೋವ ಋಣ
ನಿರಾಸೆಯ ಋಣ.

ನೀನು ಬದುಕ್ಕಿದ್ದರೆ ಈಗ ನೂರರ ಅಜ್ಜ,
ಸಂಜೆ ಪಾರ್ಕಿನಲ್ಲಿ ಕೂತಿದ್ದಾಗ,
ಮರಿಮಗಳ ಕೈ ಹಿಡಿದು ವಾಕಿಂಗ್ ಹೊರಟಿದ್ದಾಗ
ನಾವು ಸೆಟೆದು ಕೇಳುತ್ತಿದ್ದೆವು:
'ಎಲ್ಲಿ ಗಾಂಧಿ ಕನಸಿದ ನಾಡು?
ಎಲ್ಲಿ ನೀನು ಕನಸಿದ ನಾಡು?'

ನೀನು ಉತ್ತರಕ್ಕೆ ಪ್ರಿಯದರ್ಶಿನಿಯ
ಹುಡುಕುತ್ತಿದ್ದೆ;
ಮೊಮ್ಮಗನ ಚೀಲ, ಮರಿಮಗಳ ಜೇಬು
ತಡಕುತ್ತಿದ್ದೆ.
ಆಗ
ಹಣೆಯ ಮೇಲೆ ಬೆವರ ಸಾಲು!

ನಿನ್ನ ಮೇಲೆ ನಮಗೆ ಕೋಪವಿಲ್ಲ
ಅಜ್ಜ
ದುಃಖವಿದೆ: ಇತಿಹಾಸದ ಬೆಳ್ಳಿಗೆರೆ
ವಿಷಾದದ ಪರಂಪರೆಯಾದುದಕ್ಕೆ.
ಆದರೂ
ನಿನ್ನ ನೆನೆಯುತ್ತೇವೆ ಕೃಷಿಕನ
ನೆನೆವಂತೆ
ನಿನ್ನ ಪ್ರೀತಿಸುತ್ತೇವೆ, ಗುಲಾಬಿಯ
ಪ್ರೀತಿಸುವಂತೆ.

# ನಲವತ್ತರ ನಗು

ನನಗೀಗ ನಲವತ್ತರ ಸಮ ವಯಸ್ಸು!
ಕೈಕಾಲು ಕೀಲು ಕೀಲು
ಸಂದುಗೊಂದಲ್ಲಿ ಚಿಗುರೊಡೆದ ಬಳ್ಳಿ
ಒಂದೊಂದೂ ಬೆಳೆದು ಯೌವ್ವನವಾಗಿರುವ
ಸಂತಾನ.

ನನಗೆ ಅಚ್ಚರಿಯಾಗುತ್ತದೆ!
ನನ್ನ ಕಣ್ಣ ಮುಂದೆಯೇ ಬೆಳೆದ
ಹುಲ್ಲು ಪೈರು ಹೂವಾಗಿ ತೆನೆಯಾಗಿ
ಕಾಳಾಗಿ ಜೀವಶಕ್ತಿಯಾಗಿ
ನಿಂತಾಗ
ಹೆತ್ತ ಒಡಲಿಗೆ ಪುನೀತ ತೃಪ್ತಿ, ನೆಮ್ಮದಿ!

ಆದರೂ ಅಲ್ಲಲ್ಲಿ ಕುಸಿವ ನೆಲ; ಕದಿವ
ಗುಳ್ಳೆನರಿ ; ಹೆತ್ತಮ್ಮನನ್ನೇ ಮಾರುವ
ಮೀರ್‌ಸಾದಿಕ್ ಮಕ್ಕಳು! ನನ್ನ
ರಕ್ತಕ್ಕೆ ಹಾತೊರೆವ ಬ್ರಹ್ಮ ರಾಕ್ಷಸರು.

ನನ್ನ ಮೈತುಂಬ ಹರಿಯುತ್ತವೆ ನದಿಗಳು
ಆದರೊಮ್ಮೊಮ್ಮೆ ಬತ್ತುತ್ತವೆ ಕೆಲವು;
ನನ್ನ ಮೈ ತುಂಬ ಅರಳುತ್ತವೆ ಹೂಗಳು
ಆದರೊಮ್ಮೊಮ್ಮೆ ನಾರುತ್ತವೆ ಹಲವು.

ಆದರೆ ಹೆದರಬೇಕಿಲ್ಲ;

ಇರುವ ನದಿಯೊಂದೇ ಸಾಕು -
ನಾಳಿನ ಒಕ್ಕಲ ಜೀವಕ್ಕೆ,
ಅರಳುವ ಹೂವೊಂದೇ ಸಾಕು-
ಸೃಷ್ಟಿಸಂತಾನಕ್ಕೆ.

ನಕ್ಷತ್ರ ಯುದ್ಧದಾಹದ ದೈತ್ಯ ಶಕ್ತಿಯೆದುರು
ನನ್ನ ಹರೆಯ ಚಿಕ್ಕದೇನಲ್ಲ!
ಬೆಂಕಿಯ ಮಧ್ಯೆ ಶಾಂತಿ ತಂಪನ್ನೆರಚುವ
ಗುಂಡಿನ ಮಳೆಯ ಮಧ್ಯೆ ಅಹಿಂಸೆಯ ನಗುವ
ಸೀತೆ-ಗಾಂಧಿಯರ ಜೀವ ಭೂಮಿ ನಾನು!

# ನೋವು ನಗುವಾದ ದಿನ

ಅನುಮಾ ನದಿ ತೀರದಲ್ಲಿ
ಸೂರ್ಯೋದಯದ ಹೊತ್ತು,
ಜಗದ ನಿದ್ದೆ ಹರಿದು ಬಯಲು
ಕಣ್ಬಿಡುವ ಹಕ್ಕಿ ಹೂಗಳ ಇಂಚರ;
ನದಿಗೆ ನದಿಯೇ ಸೂರ್ಯನಾಗಿ
ಹರಿದ ಹರಿದೇ ಹರಿದ ನಿಶ್ಶಬ್ಧ ಶಾಂತಿ!

ಆದರೆ ಇವನ್ನೊಬ್ಬ ಅಶಾಂತ ಸಂತ್ರಸ್ತ.

ಕೀಳುತಿಹನು
ಒಂದೊಂದೇ ಬಂಧ, ಬಿಡಿಸಲಾರದ
ಕರ್ಣ ಕವಚ, ಕರಳು ಬಳ್ಳಿಯ ಬಂಗಾರ ಸೆಳೆತ!
ಕತ್ತರಿಸಿಯೇ ಬಿಟ್ಟ ಕೇಶ!!

ನದಿಯಂತೆ ತಲೆಯೂ ಬಯಲು
ಸೂರ್ಯನಂತೆ ತಾನೂ ಸಂಚಾರಿ
ಎದೆಯು ಮಾತ್ರ ಮೊರೆವ ಬಿರುಗಾಳಿ
ಎತ್ತ? ಎತ್ತ? ಎಲ್ಲಿ? ಎಲ್ಲಿ?
ಮಾನವ ಕುಲದ ಶಾಂತಿ?
ಅಳಿವುದೆಂದು ಮೇಲರಿಮೆ ಭ್ರಾಂತಿ?

ರಾಹುಲ ಎದ್ದಿಹನೆ? ಯಶೋದೆ ಕಣ್ಣೀರಿಡುತಿಹಳೆ?
ಜಗದ ಶಾಂತಿ ನೆಮ್ಮದಿಗೆ
ಹತ್ತಿರದಾತ್ಮಗಳ ನೋವು, ಸಂಕಟ!

ದಂಡಿಸಬೇಕು ದೇಹ ಬಿಡಬೇಕು ಮೋಹ
ಹರಿವ ನೀರಿದು ನೋಡು:
ಕೊಳೆ ಕೊಚ್ಚೆ ಕೊಚ್ಚಿ ಹಸಿನಾಗುವ ಬದುಕು,
ಮೂಡಿದ ತೀರ್ಮಾನ ಗತಿಗಾಧಾರವಾದರೆ ಸಾಕು.

ಇನ್ನಾದರೂ ಹಾರಿಗಡ್ಡ ಬರುವ
ಮುಳ್ಳು ಬೆಟ್ಟ, ಕೊಳ್ಳ ದಾಟಬೇಕು;
ಈಗ ತಾನೆ ಬೆಳ್ಳಂಬೆಳಕಾಗುತ್ತಿದೆ ನೋಡು
ಕಾಣದಿದ್ದುದು ಕಾಣುತ್ತಿದೆ ನೋಡು.

ತಡಬೇಡ, ತಡೆಯಬೇಡ ಮನವ
ಕಾಲಿಗುಂಟು ಶಕ್ತಿ; ಚೇತನಕ್ಕುಂಟು ಗುರಿ.
ಅವಕಾಶವೆಲ್ಲಿದೆ ಹತಾಶೆಗೆ?

ಅನುಮಾ ನದಿ ತೀರದಲ್ಲಿ
ಸೂರ್ಯೋದಯದ ಹೊತ್ತು:
ಬುದ್ಧನಲ್ಲದ ರಾಜಕುಮಾರ ಸಾಮಾನ್ಯನಾಗಿದ್ದ!
ಕೇಳಿಸುತ್ತಿತ್ತು - ಹಕ್ಕಿಯಿಂಚರ, ನದಿಯ ಕಲರವ;
ಮಿಡಿತ ಮಿಡಿತವೂ ಸಾಮಾನ್ಯತೆಯನುಭವದಾನಂದ.
ದೂರವಿಲ್ಲ ಗೊತ್ತುಗುರಿ-
ದೂರವಿಲ್ಲ ಸಾಮಾನ್ಯತೆ ಅಸಾಮಾನ್ಯತೆಗೇರುವ ಪರಿ,
ಬಡವರೆದೆಯ ಸುಖದುಃಖ
ಹಾಡಾಗುವ ದಿನ;
ವರ್ತಮಾನ ಇತಿಹಾಸವನ್ನಣಕಿಸುವ ದಿನ,
ಬುದ್ಧನಾಗುವ ದಿನ, ನೋವು ನಗುವಾಗುವ ದಿನ.

# ಪ್ರೀತಿಯ ಬುಗ್ಗೆ

ನನಗೊಂದ ಹಾಡ ಹಾಡು ಗೆಳತಿ
ಆದರದು ಹಗಲು ಹಾಡಾಗಿರುವುದು ಬೇಡ
ಪ್ರೇಮಿಗಳಿಗೆ ಸೂರ್ಯ ಸದಾ ಶತ್ರುನೋಡು
ಅದಕ್ಕಾಗಿ
ಹಾಡು ಗೆಳತಿ ಕತ್ತಲೆಯ ಬಗ್ಗೆ
ಸರಿದಾಡುವ ನೆರಳ ಬಗ್ಗೆ
ಮಧ್ಯರಾತ್ರಿಯಲ್ಲಿ
ಮಿಲನದ ನೆನಪಿನ ಲಗ್ಗೆ
ಯ
ಹಾಡುಗೆಳತಿ ಹಾಡ ಹಾಡುಗೆಳತಿ
ಸಮಾನತೆಯ ಬಗ್ಗೆ
ಆಗು
ಪ್ರೀತಿಯ ಬುಗ್ಗೆ.

# ಇದು ಉತ್ತಮ ಪ್ರಿಯೆ

ಯಾವತ್ತೂ ಉತ್ತಮ ಪ್ರಿಯೆ-

ಸಾಯುವುದಕ್ಕಿಂತ ಬದುಕುವುದು
ದ್ವೇಷಕ್ಕಿಂತ ಪ್ರೀತಿಸುವುದು
ನಾಶ ಮಾಡುವುದಕ್ಕಿಂತ ಸೃಷ್ಟಿಸುವುದು
ಸುಮ್ಮನಿರುವುದಕ್ಕಿಂತ
ಏನಾದರೊಂದು ಒಳಿತು ಮಾಡುವುದು
ಅಪ್ರಾಮಾಣಿಕತೆಗಿಂತ ಪ್ರಾಮಾಣಿಕವಾಗಿರುವುದು
ಒಪ್ಪಿಕೊಳ್ಳುವುದಕ್ಕಿಂತ ಪ್ರಶ್ನಿಸುವುದು
ದುರ್ಬಲತೆಗಿಂತ ಗಟ್ಟಿಯಾಗುವುದು
ಜಿಗುಪ್ಸೆಗೊಳ್ಳುವುದಕ್ಕಿಂತ ಆಶಾವಾದಿಯಾಗಿರುವುದು
ಹೆದರಿಕೆಗಿಂತ ಸಾಹಸ ಮಾಡುವುದು.

ಎಲ್ಲಕ್ಕಿಂತ ಮಿಗಿಲಾಗಿ
ಗುಲಾಮನಾಗಿರುವುದಕ್ಕಿಂತ ಸ್ವತಂತ್ರನಾಗಿರುವುದು.

# ಸತ್ಯ

ನಬ್ಬಿಬ್ಬರ ನಡುವಿನ ಬಂಧನ
ಬಾಳಿನ ಅದ್ಭುತ ಸ್ಪಂದನ
ಎರಡೂ ಶರೀರದಲ್ಲಿ ಒಂದೇ ಪ್ರಾಣ
ಎರಡೂ ಆತ್ಮದಲ್ಲಿ ಒಂದೇ ತ್ರಾಣ
ಎಂದು
ರೋಮ ರೋಮವನ್ನು ತುಡುಕಿ
ತಡಕಿ ಅಗೆದು
ತೆಗೆದದ್ದಾದರೂ ಏನು?

ಕತ್ತಲ ಸುಳಿ ಹಿಡಿದು ಮೀಸೆಯಲ್ಲಿ ನಕ್ಕೂ
ಎತ್ತ ತಿರುಗಿ
ನಡೆಸಿದರೂ ಶೋಧ
ಸಿಗುವುದೆ ಇಬ್ಬರಲ್ಲಿ ಏಕ ಮಿಡಿವ
ಜೀವ ಸೂತ್ರ!

ವೃಥಾ ಬರಿದೇ ಜಿಜ್ಞಾಸೆ ಏಕೆ ಬೇಕು?
ಪ್ರಾಣ ತ್ರಾಣಗಳ ಹಿಂದಿನ ಸತ್ಯವ
ಬಯಲು ಮಾಡಿ ಮುಖವಾಡ ಕಳಚಿ
ನಿಂತರೆ
ಎದೆಯ ಮೂಲಕ ಹಾದು ಬರುವ
ಬೆಳಕ -
ಸತ್ಯಕ್ಕೆ ಹೆದರಿ ಕಣ್ಣು ಮುಚ್ಚಿಕೊಳ್ಳದಿರುವುದು
ಎದೆಕೊಟ್ಟು ನಿಲ್ಲುವುದನ್ನು ಕಲಿಯುವುದು
ಇಬ್ಬರಿಗೂ ಒಳಿತು.

# ಅರ್ಥ

ಮಟ ಮಟ ಮಧ್ಯಾಹ್ನ ಧರೆಹತ್ತಿ
ಉರಿಯುತ್ತಿದೆ
ಪರೀಕ್ಷಾ ಕೊಠಡಿಯಲ್ಲಿ ಕಟ್ಟಿದೆ
ಪಕ್ಷಿಗೂಡು
ಮೊಟ್ಟೆ ಮರಿಯಾಗದ ಲೋಳೆ
ಬರಿದೇ ಅಳುತ್ತಿದೆ ಅಮ್ಮಹಕ್ಕಿ.

ಹುಟ್ಟಿನೊಡನೆ ಕಟ್ಟಿಕೊಳ್ಳದ ಅರ್ಥ
ಸಾವಿನಲ್ಲೂ ಅದೇ ಸ್ಥಿತಿ ನಿರರ್ಥ
ಬೆಳೆಯಿತು ಮರ ಹೂವಿಲ್ಲ ಹಣ್ಣಿಲ್ಲ
ಬೆಂಕಿಯೂ ಆಗದ ಕಾಷ್ಠ.

ಜುಮ್ಮೆನಿಸುವ ಪ್ರಕೃತಿಯೂ ಮಂಕಾದರೆ
ಗತಿಯೇನು?
ರುಚಿಯಿಲ್ಲದ ಸಮಾಗಮ;
ರಂಪದೊಡನೆ ಆರಂಭಗೊಂಡ ಸಂಸಾರ.
ಅವನ ಕೈ ಅವಳ ಮುಡಿಗೆ
ಅವಳ ಕೈ ಅವನ ಅಡೆಗೆ
ಉಪ್ಪು ಖಾರವಿಲ್ಲದ ಬರಿ ಗೊಡ್ಡು ಸಾರು!

ಮಟ ಮಟ ಮಧ್ಯಾಹ್ನ ಧರೆ ಹತ್ತಿ
ಉರಿಯುತ್ತಿದೆ
ಇನ್ನಾದರೂ ಮಳೆ ಬರಬೇಕು.
ಪಕ್ಷಿ

ಗೂಡು ಕಟ್ಟಲು ಹುಡುಕುತ್ತಿದೆ ಆಯಕಟ್ಟಿನ ಮರ,
ಸಂಗಾತಿಯ ಚುಂಚು ಚುಂಬನ ಸಂಭೋಗ
ಫಲಿಸಬೇಕು-
ಅದಕ್ಕೆ ಹೂವು ಬೇಕು ಮಕ್ಕರಂದಬೇಕು.

ಕಿತ್ತು ಕೀಳಬೇಕು
ಮನಸ್ಸು ಮನಸ್ಸುಗಳ ನಡುವಿನ ಗೋಡೆ
ಮನಸೇರದೆ ತನುಸೇರಿದರೇನು ಬಂತು?
ಅದಕ್ಕೆ ಮಳೆಬೇಕು
ಭೂಮಿ ತನುವಾಗಿ ಹದವಾಗಿ ಬೀಜಕ್ಕೊಂದು
ಅರ್ಥವಾಗಬೇಕು.

# ಬೆಂಕಿ

ನಿಮಗೆ ಮನೆ ಸುಡಲು ಬೆಂಕಿ ಬೇಕೆ?
ಅದು ಸಿಗುತ್ತದೆ
ನಿಮಗೆ ಹೊಲಗದ್ದೆ ಸುಡಲು ಬೆಂಕಿ ಬೇಕೆ?
ಅದು ಸಿಗುತ್ತದೆ
ಜೀವ ಸಹಿತ ಸೊಸೆ ಸುಡಲು ಬೆಂಕಿ ಬೇಕೆ?
ಅದು ಸಿಕ್ಕೇ ಸಿಗುತ್ತದೆ
ಮನುಷ್ಯರ ಎದೆಗೆ ಹಚ್ಚಲು ಬೆಂಕಿ ಬೇಕೆ?
ಅದು ದಾರಾಳವಾಗಿ ಸಿಗುತ್ತದೆ.

ನಿಮ್ಮ ಮಗುವಿಗೆ ಹಾಲು ಬಿಸಿ ಮಾಡಲು
ಬಿಸಿ ನೀರ ಸ್ನಾನ ಮಾಡಿಸಲು
ಅಡುಗೆ ಮಾಡಿ ಬಡಿಸಲು
ಬೆಂಕಿ ಬೇಕೆ?
ಆದರದು ಸಿಗುವುದಿಲ್ಲ!

ಎದೆಯಿಂದ ಎದೆಗೆ ಬೆಚ್ಚನೆಧಾರೆ ಹರಿಸಬೇಕೆ?
ಅಯ್ಯೋ, ಅದು ತಣ್ಣಗಾಗಿದೆಯಲ್ಲ!

# ಮೂರು ಪದ್ಯಗಳು

## ನಿಗೂಢತೆ

ಸಂತರು ಹೇಳುತ್ತಾರೆ: ಜೀವನ ಒಂದು ನಿಗೂಢ;
ಅತ್ಯಂತ ಪ್ರೀತಿಯಿಂದ ಅದನವರಪ್ಪುತ್ತಾರೆ.
ಆದರೆ ಕೆಲವು ಗೂಢಗಳು ಕಚ್ಚುತ್ತವೆ, ಬೊಗಳುತ್ತವೆ,
ಕತ್ತಲೆಯಲ್ಲಿ ಬಂದು ನಮ್ಮನ್ನು ನುಂಗುತ್ತವೆ.

## ಕತ್ತಲು

ಕತ್ತಲು ಎಲ್ಲ ಹೊಳೆಯುವ ಹಗಲನ್ನು ಕಬಳಿಸುತ್ತದೆ;
ತನ್ನದೇ ಹಾದಿಯಲ್ಲಿ ಎಲ್ಲವನ್ನು ಜಬರ್ದಸ್ತಿನಿಂದ ಪಡೆಯುತ್ತದೆ.
ಕತ್ತಲು ಆಲಿಸುತ್ತದೆ, ಗಮನಿಸುತ್ತದೆ, ಕಾಯುತ್ತದೆ ;
ಅಧಿಕಾರ ಚಲಾಯಿಸುತ್ತದೆ, ಹಬ್ಬ ಆಚರಿಸುತ್ತದೆ.
ಕೆಲವೇಳೆ ಅದು ನಿಶ್ಶಬ್ಧಗೂಢವಾಗಿ ಬರುತ್ತದೆ;
ಮತ್ತೆ ಕೆಲವೇಳೆ ಕೊಂಬು ಕಹಳೆ ನಗಾರಿ ಸಹಿತ ಹಾಜರಾಗುತ್ತದೆ.

## ಪ್ರೀತಿ - ನರಕ - ಸ್ವರ್ಗ

ನಾವು ಪ್ರೀತಿಯನ್ನು ಆಲಂಗಿಸಬಹುದು, ಆದರೆ ತಡೆದಲ್ಲ.
ನಾವು ಏಕೆ ಜೊತೆ ಮಲಗಬೇಕು, ಅಪ್ಪಟ ದ್ವೇಷದಿಂದ?

ನಮ್ಮ ಸೃಷ್ಟಿನರಕವ ನಾವೇ ನೋಡಲು ನಂಬಿಕೆಬೇಕು;
ನಂಬಿದ ಆ ನರಕಕ್ಕೆ ಬೆಂಕಿ ಹಚ್ಚಿದರೆ,
ಆ ಬೆಂಕಿಯಲ್ಲಿ ನಮ್ಮ ನಂಬಿಕೆ ಕರಕಾಗುವುದ ಕಾಣಬಹುದು

ಸ್ವರ್ಗವೋ, ಅದು ಕೂಡ ನಮ್ಮ ಸೃಷ್ಟಿಯೆ!
ನಮಗೆ ನಾವೇ ನಮ್ಮ ದುಃಖಗಳಿಗೆ ಪರಿಹಾರವಲ್ಲಿ
ಹುಡಕಬಹುದು.

ಅದಕ್ಕೆಲ್ಲ ಬೇಕಾಗಿರುವುದೊಂದೇ-
ಕಲ್ಪನೆ.

- The Book of Counted Sorrows
ನಿಂದ ರೂಪಾಂತರ.

# ರೂಪ

೧

ಕರುಣೆ ತುಂಬಿದ ಕಣಜ ಮಾನವನೆದೆ
ಅನುಕಂಪೆಯ ಮುಕುರ ಮನುಜ ಮುಖ
ಮತ್ತೆ ಪ್ರೀತಿಯೋ, ತಂಬಿ ಹರಿವ ಮಾನವತೆ
ಶಾಂತಿಯು ದಿರಿಸು ನೋಡು ಮಾನವ ದೇಹ!

೨

ಕ್ರೂರತೆಯ ತವರು ಮಾನವ ಹೃದಯ
ಕರಬು ಮನುಷ್ಯಮುಖ
ಭಯಾನಕತೆಯೇ ಮನುಷ್ಯನ ನಿಜರೂಪ
ರಹಸ್ಯಕೂಪ ಮಾನವನುಡುಪು.

೩

ಮಾನವದೇಹ ಧರಿಸಿದೆ ಅಭೇದ್ಯ ಉಕ್ಕು ಉಡುಪು
ಮನುಷ್ಯ ರೂಪವೆ ಧಿಕ್ಕಾರಕ್ಕಾಗರ!
ಮನುಷ್ಯಮುಖವದು ಕುದಿವ ಕುಲುಮೆ
ಮನುಷ್ಯನೆದೆಯೋ, ಹಸಿವಿಂಗದ ವೃಕೋದರ!

- ವಿಲಿಯಂ ಬ್ಲೇಕ್

(ಟಿಪ್ಪಣಿ: ರೂಪ -೧ ವಿಲಿಯಂ ಬ್ಲೇಕ್‌ನ Songs of Innocence ನಲ್ಲಿ ಪ್ರಕಟಗೊಂಡಿದೆ. ಆತ ಸತ್ತ ನಂತರ ಪ್ರಕಟವಾದ Songs of Experience ನಲ್ಲಿ ರೂಪ -೨,-ರೂಪ-೩ ಪ್ರಕಟಗೊಂಡಿವೆ. ಮನುಷ್ಯನ ರೂಪ ಮತ್ತು ವ್ಯಕ್ತಿತ್ವದ ಬಗ್ಗೆ ಬ್ಲೇಕನ ಅನುಭವಾಭಿಪ್ರಾಯದ ಬದಲಾವಣೆಯನ್ನು ಗುರುತಿಬೇಕು.)

# ಕೆಲವು ಪದ್ಯಗಳು

## ನಿದ್ರೆ

ನಡುರಾತ್ರಿಯಲ್ಲಿ ಸೂರ್ಯನನ್ನು
ಕಾಣುವುದು
ತಾಮ್ರದ ಕಾವು ನಿಮ್ಮ ಕಣ್ಣಿನಲ್ಲಿ ಕೆಂಪಾದಂತೆ;
ಆದರೆ
ಕಾಲ ನಿಮ್ಮ ತೋಳುಗಳಲ್ಲಿ
ಹಾಯಾಗಿ ನಿದ್ರಿಸುತ್ತದೆ.
ಹೌದೆ?

## ಯಾರು ಕಡು ಮೂರ್ಖರು ?

ಯಾರು ಕಡು ಮೂರ್ಖರು-
ಕತ್ತಲೆಗೆ ಹೆದರುವ ಮುಗ್ಧ ಮಗುವೋ?
ಅಥವಾ
ಬೆಳಕಿಗೆ ಹೆದರಿ ನಡುಗುವ ದಡಿಯನೋ?

- Mauviee Freesill ನ ಕವನವೊಂದರ ರೂಪಾಂತರ.

## ನಾವು

ಕಂತ್ರಿನಾಯಿ
ಕತ್ತಿಗೆ ಬಿಗಿದು ಸರಪಳಿ
ಜಾತಿನಾಯೆಂದು
ಮೆರೆಸುವ
ಬಿಕನಾಶಿ ಜನ.

## ಬಿರುಗಾಳಿಯೇ ಹೇಳು?

ಬೀಸುವ ಬಿರುಗಾಳಿಯೇ
ಹೇಳು, ನಿಜವ ಹೇಳು
ಮರದ ಯಾವ ಎಲೆ
ನಿನ್ನೊಡನೆ
ತೂರಿ ಹಾರುವುದು
ಕತ್ತಲೆಯಿಂದ ಬೆಳಕಿನೆಡೆ ಸಾರುವುದು!

## ಗುಂಡಿಗೆ ಬಿದ್ದವನು

ಹೆದರಿಕೆಯೆಂಬ
ಗೊಬ್ಬರದ ಗುಂಡಿಗೆ ಯಾವನು ಬೀಳಬಲ್ಲನೋ
ಅವನೇ ಅಲ್ಲಿಂದೇಳುವ ಕಲೆಯಬಲ್ಲ!
ಕಲೆತು ಧೈರ್ಯದಿ ಗರ್ಜಿಸಬಲ್ಲ!

## ಸಾವೇ ಇಲ್ಲದ ಕೊನೆ

ಒಂದು ಪ್ರವಾಹ, ಒಂದು ಮೊರೆತ
ಒಂದು ಸಿಡಿಲ ಹೊಡೆತ
ಮಾರಿಯ ರೂಪದರ್ಶನ:

ಇದಕ್ಕೆ ಸಾವೇ ಗುರಿ ತಾನೆ?

ಅದರ ನಿಶ್ಶಬ್ದ ಅನುರಣವೆ ಕರೆದೊಯ್ಯಬಲ್ಲುದು
ದಾರಿ ತೋರಬಲ್ಲದು
ಎಲ್ಲೆ ಇಲ್ಲದ ಬಯಲಿಗೆ!
ಸಾವೇ ಇಲ್ಲದ ಕೊನೆಗೆ!

## ಮತಾಂಧತೆ

ಮತಾಂಧತೆಯೆನ್ನುವುದು
ನೀವು ಗುರಿಯಿರದ
ಸಾಧನೆಗೆ
ಶ್ರಮವನ್ನು ದ್ವಿಗುಣಗೊಳಿಸುತ್ತಾ ಸಾಗಿ
ಕೊನೆಗೆ
ನಿರ್ವೀರ್ಯಗೊಳ್ಳುವ ಕ್ರಿಯೆ.

# ನಿನ್ನ ನೆನಪು

ಎದೆ ಮೇಲೆ ಹರಿದು ಮೈ
ಜಮ್ಮೆನಿಸುವ ಯಮಧೂತ
ಬಸ್ಸುಲಾರಿಗಳ ಚಕ್ರಗಳ ತಿರುವಿನ
ಮೋಡಿಯಲ್ಲಿ ಜೋಲಿಯಲ್ಲಿ
ನಿನ್ನ ನೆನಪು!

ನನ್ನ ಪುಟ್ಟ ಕಂದನ ಮುಗ್ಧ
ನಗೆಯಂತೆ; ಕೈ ಕಾಲುಗಳ ಕುಲುಕಾಟದ
ಅದ್ಭುತರಮ್ಯ ರಹಸ್ಯದಂತೆ,
ಕುತೂಹಲದಂತೆ- ನಿನ್ನ ನೆನಪು!

ನನ್ನ ಪತ್ನಿಯ
ಮೊಲೆಯಿಳಿಕಿನ ಗಾಢತೆಯ ಮೈ
ಮರೆವಿನ ಅಮೃತಮಯ ಸಮಯದಂತೆ
ನಿನ್ನ ನೆನಪು!

ನೆಲಮುಗಿಲು ಸೇರಿದಾಗಿನ ಭೂ
ದೇವಿಯ ಹೃದಯದಾನಂದದಂತೆ
ಮುಂಗಾರು ಮಳೆಯ ಮೊದಲು ಹನಿಯ
ಮೋಹಕ ಚುಂಬನದಂತೆ
ನಿನ್ನ ನೆನಪು!

ಮುದಿ ಹಸಿರುದುರಿ ಬಾಳು
ಜಾಳು ಜಾಳಾದ ವೈರಾಗ್ಯದ ಬುತ್ತಿ!
ಇನ್ನು ಮರ ಮರದ ಗಿಡಗಿಡದ

ಕವಲು ಕವಲು ಇರಕಲುಗಳಲ್ಲಿ
ಚಿಗುರೊಡೆಯುವಂತಾಗಿಸುವುದಾವ ಶಕ್ತಿ!
ಚಿಗುರಿನ ಚಿಗುರದು ದಿನ ದಿನಕ್ಕೆ
ರಂಗು ಪಡೆದು ಹೂಕಾಯಿ ಹಣ್ಣುಗಳ
ಆಸೆಯನ್ನು ಪೂರೈಸಲು ನಿಮಿರಿ ನಿಂತಾಗ
ಮತ್ತೆ ನಿನ್ನ ನೆನಪು!

ನಗುವಿನ ಹಿಂದಿನ ನೋವು
ನೋವಿನ ಹಿಂದಿನ ನಗು-
ಕೊಂಡಿಯ ಬೆಸೆದು ಜೋಕಾಲಿಯಾಡಿಸುವ
ನೀನು
ನನಗೆ ನೋವೆ, ನಲಿವೆ, ಸಾವೆ?
ಎಲೆ, ಓ ನಿನ್ನ ನೆನಪೆ!

# ಬಾಲ ಭಾರದ ಹಕ್ಕಿ

ಲಂಕೇಶ್ ಪತ್ರಿಕೆಯ ಮುಖ
ಪುಟದ ಪಕ್ಷಿಗೆ
ತಲೆಗಿಂತ ಬಾಲವೇ ಭಾರ.
ಪುಕ್ಕ ಎತ್ತಿ ತನ್ನ ಶೃಂಗಾರಕ್ಕೆ
ತಾನೆ ಖುಷಿ ಪಟ್ಟು
ಒಂಟಿಕಾಲಲ್ಲಿ ನಿಂತ ಭಂಗಿ!

ಭಂಗಿಗೆ ತಕ್ಕ ನೂರು ರಾಗ
ನೂರು ಸಂಧಿಯಿಂದ ಹರಿದು
ಮೈಯೆಲ್ಲಾ ಮುಲು ಮುಲು;
ನಾಡೆಲ್ಲಾ ತನ್ನದೆ ಸಂತಾನವೆಂದು
ಸ್ವಕೀರ್ತಿ ಸೋಪಾನದ ಮೆಟ್ಟಿಲು.

ಪಕ್ಷಿ ನಿಂತ ವೃತ್ತ-
ಗೋಡೆ ಕಟ್ಟಿಕೊಂಡು ಸುತ್ತ
ಶೂದ್ರಾದಿ ಶಿಷ್ಯರು
ದಾಸಾನುದಾಸರು.
ಬ್ರಹ್ಮಾಂಡವೇ ಹೀಗೆ ಬಯಲು
ಬಯಲು ಅಂದರೆ ಶೂನ್ಯ
ಸಂಪಾದನೆ ಹೀಗೆ ತಾನೆ ಆಗಬೇಕು!
ಆಗ ಮಂಡೂಕ ವಟಗುಟ್ಟುವ ಮಂತ್ರ ಕೇಳಬೇಕು!

ಪಕ್ಷಿಗೆ ಒಂದೇ ಕಣ್ಣು ಆದರೆ
ಒಳಗೆ ಸಹಸ್ರಾಕ್ಷ ದುರ್ಬೀನು.

ಶಾಂತತೆಯ ಒಳಗೆ ಅಶಾಂತತೆಯ ತವರು;
ನಗುವ ಮುಗ್ಧತೆಯ ಕುಕ್ಕಿ ತಿನ್ನುವ ಮನಸ್ಸು.

ಕಂಡ ಹೆಣ್ಣ ಮೈಯೆಲ್ಲಾ ಭೋಗಿಸುವ
ಬಯಕೆ ತೀರದ ಲಾವ ಉಕ್ಕುಕ್ಕಿ
ತಾಯಿಯಾದರೇನು? ಮಗಳಾದರೇನು?
ಇಂದ್ರನೂ ನಾಚಬೇಕು
ಇದರ ಆಟ ನೋಡಿ, ಸಾವಿರ ಕಣ್ಣ ಮುಚ್ಚಿ!

ನಾಡು ಅಗೆದಗೆದು ಚಿನ್ನತೆಗೆವ
ಬಂದೂಕು ಗುರಿ;
ಸಿಕ್ಕಿದ್ದು ದಕ್ಕಿದ್ದು ವಿಕೃತ ಆಸೆಗೆ
ಸಾಲದೆ ಎದ್ದೆದ್ದು ಉರಿವ ಉರಿ.

ತನ್ನ ಮೈಯ ತೀಟೆಗೆ ತಾನೇ
ತಿಕ್ಕಿ ತಿಕ್ಕಿ ಉದುರಿಸಿಕೊಳ್ಳಬೇಕು
ತಲೆಯ ಮೇಲಿನ ಗರಿ
ಆಗ ಕಾಣುವುದು ಹಾರಿ ನೋಡಲಾಗದ
ಬಟಾಬಯಲಿನ ಪರಿ!

# ಟಿ ಎಸ್ ವೆಂ ಮತ್ತು ನಿಸದ್ದು

ಕವಿ ರವೀಂದ್ರರಿಗ್ಗೂ ನಿಮಗೂ
ಸಂಬಂಧದ ಗುಂಟುಹಾಕಿ ಕಾಕು ಹಾಕಬಹುದಯ್ಯ!
ಆದರೆ ಎಲ್ಲಿಯ ಮಿರಾಂಡ?
ಎಲ್ಲಿಯ ಡೆಸ್ಟಿಮೋನಾ?
ಇವರಿಗೂ ನಿಮಗೂ ನಮ್ಮ ಶಕುಂತಲೆಗೂ
ಸಂಬಂಧವೇನಯ್ಯ?
ಕಳ್ಳು ಬಳ್ಳಿ ಬೆಸೆದ ಕಾಶ್ಮೀರ ಕನ್ಯಾಕುಮಾರಿ
ಸೂತ್ರವೇನಯ್ಯ?

ಹೌದು, ಸಂಬಂಧ ಕೊಂಡಿ ಹಾಕಬಹುದಯ್ಯ!
ರವೀಂದ್ರರಿಗೆ ಮಿಡಿದದ್ದು ಕುವೆಂಪುಗೆ ಮಿಡಿದಿತ್ತು.
ಮಿರಾಂಡ ಡೆಸ್ಟಿಮೋನಾ ಶಕುಂತಲೆಯರಷ್ಟೇ ಏಕೆ?
ಮಂಥರೆಯ ಆತ್ಮವೂ ವಿಶ್ವಚೇತನದಲ್ಲಿ ಒಂದಾಗಿತ್ತು!
ಕುವೆಂಪುಗೆ ಗೊತ್ತಿತ್ತು ಅಂದರೆ-
ನಿಮಗೆ ಅದು ಮೊದಲು ಅರ್ಥವಾಗಿತ್ತು,
ಅಲ್ಲವೇನಯ್ಯ?

ಶುದ್ಧ ಸಂಸ್ಕೃತೀಕರಣದ ಈ ಯುಗದಲ್ಲಿ
ದ್ರಾವಿಡ ವೆಂಕನಾಗೆ ಮರೆದದ್ದು
ನಿನ್ನ ದೇಸಿತನವಯ್ಯ.
ಯಾವ ಹಂಗೂ ಇಲ್ಲದೆ ತಳಕೂ ಇಲ್ಲದೆ
ಆಚಾರ್ಯನಾದದ್ದು ಕನ್ನಡದ ಕೋಡಯ್ಯ!

ಕೆಲವರು ಸಾಯುವಾಗಲು ಸದ್ದು ಮಾಡುತ್ತಾರೆ, ಮತ್ತೆ
ಕೆಲವರು ಸತ್ತಮೇಲೂ ಸಾಯುತ್ತಲೇ ಇರುತ್ತಾರಯ್ಯ.
ಆದರೆ
ನಿನ್ನ ಸದ್ದುನಿಸದ್ದುಗಳ ಮಧ್ಯೆ ಬೆರತ
ಮೌನಮಾತ್ರ ಎದೆಯಲ್ಲಿ ನಿರಂತರನಾದ
ಮಿಡಿಯುತ್ತಿರುತ್ತದೆಯಲ್ಲ, ಏಕಯ್ಯ?

ಸಂಜೆಯ ತಂಗು ಸೂರ್ಯನ ಮಾಗುತನ ನಿನ್ನದಯ್ಯ;
ಅದನರಿಯ ಹೊರಟ ಮಿಣುಕು ಬದುಕು ಮಾತ್ರ
ನಮ್ಮದಯ್ಯ!?

# ಬಂಡಾಯದವರು

ನಾವು ಬಂಡಾಯದವರು
ಮರಗಳನ್ನು ಕಡಿಯುವುದಿಲ್ಲ
ಕಡಿದ ಜಾಗದಲ್ಲಿ ಹೊಸ ಹಸಿರ
ಮೂಡಿಸುತ್ತೇವೆ.

ಬಣ್ಣ ಜಾತಿ ಎಣಿಸುವುದಿಲ್ಲ
ನಿವಾರಿಸುತ್ತೇವೆ.
ಮಿಶ್ರಗೊಂಡ ಸಮಾನ ತಳಿ
ಸೃಷ್ಟಿಸುತ್ತೇವೆ.

ಹೆಣ್ಣುಗಳ ನಾವು ಸುಡುವುದಿಲ್ಲ
ನೊಂದ ಬೆಂದ ಹೃದಯ ಸುಂದರ
ನಾರಿ ತುಟಿಯ
ಅರಳಿಸುತ್ತೇವೆ; ಕೆನ್ನೆ
ರಂಗು ಗೊಳಿಸುತ್ತೇವೆ.

ನಾವು ಮಹಲುಗಳ ಉಡಾಯಿವುದಿಲ್ಲ,
ಅವುಗಳನ್ನು ಶಾಂತಿ ನಿಕೇತನಗಳನ್ನಾಗಿ
ಬೆಳೆಸುತ್ತೇವೆ, ಗುಡಿಸಲುಗಳ
ನಂದನವಗಳನ್ನಾಗಿಸುತ್ತೇವೆ.

ಕತ್ತಿಗಳನ್ನು ನಾವು ದ್ವೇಷಿಸುತ್ತೇವೆ.
ಹಾರೆ ಗುದ್ದಲಿ ಪಿಕಾಸಿಗಳನ್ನು ಹೊಲ
ಗದ್ದೆ ಕರಮ ಭೂಮಿಯಲ್ಲಿ
ಪ್ರಯೋಗಿಸುತ್ತೇವೆ.

ನಾವು ರಕ್ತವನ್ನೂ ಅಸಹ್ಯ ಪಡುತ್ತೇವೆ,
ಹೂವುಗಳನ್ನು ಪ್ರಾಣಿ ಪಕ್ಷಿಗಳನ್ನು
ನೆಲಗಾಳಿ ಜಲವನ್ನು ಅಪ್ಪುತ್ತೇವೆ,
ಮುತ್ತಿಡುತ್ತೇವೆ.

ನಮ್ಮ ಪ್ರೀತಿ ದೇಶ ದೇಶದ
ಗಡಿ ದಾಟುತ್ತದೆ
ಎಲ್ಲವನ್ನು ಸೆಳೆಯುತ್ತದೆ, ಬೆಸೆಯುತ್ತದೆ.

ನಾವು ಬಂಡಾಯದವರು
ಬರುತ್ತಿದ್ದೇವೆ-
ಶಾಂತಿ ಮಂತ್ರ ಹೇಳುತ, ಪ್ರೀತಿ ಮಂತ್ರ ಸಾರುತ.

# ಮತ್ತೆ ಮಳೆ ಬರಲಿಲ್ಲ

ನೆಲ ಬಿರಿದು ಮನ ಬಿರಿದು ನಿಂತಿದೆ
ಮರದ ಮೇಲೆ ಕೋಗಿಲೆ ದನಿ ಸೊರಗಿದೆ
ಬರಿದಾದ ಕೆರೆ ಮಣ್ಣು ಒಣ ಚಿತ್ತಾರ ಬರೆದಿದೆ
ಆದರೂ ಮತ್ತೆ ಮಳೆ ಬರಲಿಲ್ಲ.

ನವದಂಪತಿಗಳ ಮಧುರ ಮಾತಿಗೆ ಹಸುರಿನ
ನೆಲೆಯಿಲ್ಲ;
ಕೂಡಿ ಆಡುವ ಹಾಡಿ ಕುಣಿಯುವ ಮಕ್ಕಳಿಗೆ
ಬೇವಿನ ತಂಪಿಲ್ಲ;
ಏಕೋ ಮತ್ತೆ ಮಳೆ ಬರಲಿಲ್ಲ.

ರಾತ್ರಿಯಿಡೀ ಬೆವರಿನ ಹಬೆ
ನಿದ್ದೆಗೂ ದೇಹಕೂ ವಿರಸ ತುಂಬಿದೆ
ಇನಿಯಳ ದೇಹವೂ ದೂರ ಇರು ಎಂದಿದೆ
ಮತ್ತೆ ಮಳೆ ಬರಲಿಲ್ಲ.

ಮುಗಿಲ ನೋಡಿ ರೈತನ ಕತ್ತು ನೊಂದಿದೆ
ನೇಗಿಲ ಕುಳ ಭೂದೇವಿಗಾಗಿ ಹಸಿದಿದೆ
ನೆಲದ ಮಕ್ಕಳ ಆಸೆ ಪಾತಾಳ ಕಂಡಿದೆ
ಆದರೂ ಮತ್ತೆ ಮಳೆ ಬರಲಿಲ್ಲ.

ಮತ್ತೆ ಮತ್ತೆ ಮಳೆ ಬರದೆ
ರಾಗಿ ಭತ್ತ ಚಿಗುರಿ ಫಲಭರಿತು ಜೋಲದೆ
ಭುವಿಯ ಮಗ ಭುವಿಯ ಸೇರಿದ
ದುಃಖ ಮಾತ್ರ ಬಯಲ ಅಲೆದಿದೆ.

# ನೆಲದ ಮಕ್ಕಳ ಹಾಡು

ಕೋಟಿ ವರುಷ ಕಳೆದರೂ
ಬರಿ ಮೇಟಿ ಹಾಲು ಕುಡಿಯುತ್ತಾ
ನಡೆದಾಡುವ ಹೆಣಗಳಾಗಿ
ದಗದಗ ಒಳಗೊಳಗೆ ಬೇಯುತ್ತಾ
ಆಕಾಶದಾಸೆಯನ್ನು ಭೂಮಿಯಲ್ಲಿ ಅರಸುತ್ತಾ,
ಸಾಗಿದ್ದೇವೆ
ನಾವು ನಗರದ ಕಾಲ್ತುಳಿತಕ್ಕೆ ನರಳಿದ್ದೇವೆ.

ಆಳುವ ದೊರೆಗಳ ಆಸೆ ತೆವಲುಗಳ
ಹೆತ್ತಿದ್ದೇವೆ, ಹೊತ್ತಿದ್ದೇವೆ.
ಆದರೂ ಹೊಲಗಳು ಫಲ ಬಿರಿಯಲಿಲ್ಲ,
ಬಿರಿದ ಫಲ ಕಣಜ ತುಂಬಲಿಲ್ಲ,
ಶತಮಾನಗಳ ಸಂಕಟ ಹಿಂಗಲಿಲ್ಲ.
ಆದರೂ ಸಾಗಿದ್ದೇವೆ
ಕನಸುಗಳ ಸಾವ ನೂಕುತ್ತಾ, ದೇವೇಂದ್ರನ ಬಯ್ಯುತ್ತಾ.

ಈ ರಾಮರಾಜ್ಯದುದಯಕ್ಕೆ
ನಮ್ಮ ರಕ್ತ ಸಮ ಹರಿದಿದೆ, ಬೆವರು ಸುರಿದಿದೆ.
ಅಲ್ಲಿ ಕನಸಿದ ನಮ್ಮ ಮಕ್ಕಳ ಸುಖ
ಕಾರ್ಖಾನೆ ಹೊಗೆಗೂಡಲ್ಲಿ ಬೆಂದು ಕರಿಕಾಗಿದೆ,
ಕಛೇರಿಗಳ ಕಡತಗಳಲ್ಲಿ ಧೂಳಾಗಿದೆ,
ಪೋಲೀಸು ಲಾಟಿಗುಂಡುಗಳಿಗೆ ಎದೆಯಾಗಿದೆ.
ಆದರೂ ಸಾಗಿದ್ದೇವೆ
ನಮ್ಮ ಮಕ್ಕಳ ಮುಗ್ಧ ನಗುವ ಸವಿಯುತ್ತಾ
ಮತ್ತೆ ಅವರ ಸುಖ ಕನಸುತ್ತಾ.

ನಮ್ಮ ದುಡಿಮೆ ನಮ್ಮ ಛಲ
ನೆಲದ ಕಣ ಕಣ ನಮ್ಮ ಬೆವರ ಫಲದ ಚಿಗುರು
ನಾವೆ ಉಸಿರು ಬಸಿರು ನೆಲದ ಹೆಸರು,
ಆದ್ದರಿಂದ ಸಾಗುತ್ತೇವೆ
ಹಕ್ಕಿಗಾಗಿ ಹೋರಾಡುತ್ತಾ ಹಸಿರು ರಾಜ್ಯ ಕಟ್ಟುತ್ತಾ

# ಅವಳು ಮತ್ತು ಸಾವು

ಆಕೆಗೆ ದೊಡ್ಡ ಬಟ್ಟಲು
ಕಣ್ಣುಗಳಿವೆ;
ಕಪ್ಪು ಮುಖದಲ್ಲಿ ಬಿಳಿಯ
ಹಲ್ಲುಗಳಿವೆ- ಹಸಿರಲ್ಲಿ
ಮಲ್ಲಿಗೆಯಿದ್ದಂತೆ.

ಇಂದು
ಅವಳ ಮುಖದಲ್ಲಿ
ನೋವು, ಕಣ್ಣಲ್ಲಿ ನೀರು;
ಮಲ್ಲಿಗೆಯ ಹಲ್ಲು ಕಪ್ಪು ಶಾಯಿ.

ಅವಳಿಗಿನ್ನೂ ಮೊಲೆ ಮೂಡುತ್ತಿವೆ;
ತಮ್ಮಂದಿರು ಇಬ್ಬರಿದ್ದಾರೆ,
ಅಪ್ಪ ಅಸ್ಪಷ್ಟ ನೆನಪಾಗಿ ಉಳಿದು
ಮರೆಯಾಗಿದ್ದಾನೆ. ಇಂದು
ತಮ್ಮಂದಿರು ತೆಕ್ಕೆ ಬಿದ್ದು ಅಳುತ್ತಿದ್ದಾರೆ,
ಶವ ತಬ್ಬಿ ಭಿಕಾರಿಗಳಾಗಿದ್ದಾರೆ.

ರಾತ್ರಿ ಗಂಜಿ ಬಡಿಸಿ
ತಾನೂ ವಸಿ ಉಂಡು
ಮಲಗಿದ್ದ ಅವ್ವ, ಬೆಳಿಗ್ಗೆ
ಅಲುಗಾಡಿಸಿದಾಗ ಶವ!

ಲೋಕವೆಂದರೆ ಏನು? ಕೆಲಸವೆಂದರೆ ಏನು?
ಈ ಏನು ಏನುಗಳು,
ಹಣಕಾರು ಉಪ್ಪರಿಗೆಗಳು
ಬೆರಗುಗಣ್ಣ ವಸ್ತುಗಳಾಗೇ
ಕಣ್ಮುಂದೆ ಕುಣಿಯುತ್ತಿರುವ ಇಂದು,
ಅವಳು
ತನ್ನೊಡನೆ ಎರಡು ಜೀವದ ಹೊರೆ ಹೊತ್ತು,
ಸಾಗಿರುವ ಸಂಸಾರಗಿತ್ತಿ.

ಸೊಂಪಾಗಿ ಬೆಳೆದು ಅರಳುವ ಮುನ್ನ
ಭಾರಕೆ ಕುಸಿದು
ನರಳುವುದು ಬದುಕು!

# ನ್ಯಾಯ

ನಾವು ಗೆಳೆಯರಿಬ್ಬರು
ಲೋಕ ಸತ್ತಿದೆ ಅನ್ಯಾಯಗಳ
ಕಂತೆ ಕಂತೆ ಫೈಲುಗಳಲ್ಲಿ
ಎಂದು
ಹೋದೆವು ಕೋರ್ಟಿಗೆ

ಸಿಗಲಿಲ್ಲ ಹುಡುಕಿದೆವು
ಬದುಕಿನ ನಿಗೂಢ ಸತ್ಯಗಳು
ಬದುಕಿನ ನಗ್ನ ಭಾಗದ ಕಸರತ್ತುಗಳು.
ಸುಸ್ತಾಗಿ
ಕಾಫಿಗೆಂದು ಕ್ಯಾಂಟಿನ್ನಿಗೆ
ನಡೆದಾಗ
ಲಾಯರುಗಳು, ಅಳಕು
ಮೋರೆಯ ಕಕ್ಷಿದಾರರು
ಸುತ್ತ ನೆರೆದಾಗ
ಕಾಫಿ ಬಟ್ಟಲಲ್ಲಿ ರಕ್ತ ಕಂಡಿತ್ತು.

'ಜೀವ ದಾನಿಸುವ ಹಕ್ಕಿಲ್ಲದ ಕೈಗೆ
ಜೀವ ತೆಗೆಯುವ ಹಕ್ಕಿಲ್ಲ'

ನ್ಯಾಯ ದೇವತೆಯ ಕರುಣಾರ್ದ್ರ
ದೃಷ್ಟಿಗಾಗಿ
ಲೋಕ ಬೇಡಿತ್ತು.

ಮಧ್ಯಾಹ್ನದ ಸುಡು
ಸುಡು ಬಿಸಿಲಲ್ಲಿ, ಬೆವರ ಗಬ್ಬಿನಲ್ಲಿ
ವಾಕರಿಕೆಯ ತಂದಿತ್ತು,
ದುರ್ವಾಸನೆಯೊಂದು.

ನೋಡಿದೆ:
ನ್ಯಾಯಾಲಯದಲ್ಲಿ ಕತ್ತೆಯೊಂದು
ಸತ್ತು ಬಿದ್ದಿತ್ತು.
ಕಾಕ ಬಳಗ ಅದರ ಮೇಲೊರಗಿ
ಮಾಂಸ
ಕಿತ್ತು ತಿನ್ನುತ್ತಿತ್ತು.



'ಚಿಗುರಾಗು, ಎಲೆಯಾಗು, ಹೂವಾಗು, ಮರವಾಗು, ಬದುಕಾಗು' ಎಂದು ಕವಿತೆಯನ್ನು ಆಹ್ವಾನಿಸುವ ಶಿವರಾಮು ಕಾಡನಕುಪ್ಪೆ, ತಮ್ಮ ಬಗೆಗಿನ ಎಚ್ಚರವನ್ನು ಕಳೆದುಕೊಂಡವರಲ್ಲ. 'ನನ್ನ ಮೈತುಂಬ ಹರಿಯುತ್ತವೆ ನದಿಗಳು / ಆದರೊಮ್ಮೊಮ್ಮೆ ಬತ್ತುತ್ತವೆ ಕೆಲವು / ನನ್ನ ಮೈತುಂಬ ಅರಳುತ್ತವೆ ಹೂಗಳು / ಆದರೊಮ್ಮೆ ನಾರುತ್ತವೆ' ಎಂಬ ವಾಸ್ತವದೊಂದಿಗೆ ಮತ್ತು 'ಇರುವ ನದಿಯೊಂದೇ ಸಾಕು / ನಾಳಿನ ಒಕ್ಕಲ ಜೀವಕ್ಕೆ / ಅರಳುವ ಹೂವೊಂದೇ ಸಾಕು / ಸೃಷ್ಟಿ ಸಂತಾನಕ್ಕೆ' ಎಂಬ ಆತ್ಮವಿಶ್ವಾಸ ದೊಂದಿಗೆ ಕಾಲ ಅಂತರ್ಗಂಗೆಯಾಗಿ ಹರಿದದ್ದು, ಭಾವ ಸಮಾಧಿಯ ಜೀವ ಸ್ಪಂದನವಾಗಿ ಮಿಡುಕಿದ್ದು, ಈ ಮಿಡುಕಾಟದ ಹಿಂದೆ ಜೀವಜಗತ್ತಿನ ಬಗೆಗಿರುವ ಗಾಢಪ್ರೀತಿ ಯಂತೆಯೇ, ಕೊಳೆತ ವ್ಯವಸ್ಥೆಯ ವಿರುದ್ಧದ ಕೋಪ ಆಕ್ರೋಶಗಳಿರುವುದನ್ನೂ ಗುರುತಿಸಬಹುದಾಗಿದೆ. ನಿರಂತರವಾಗಿ ಉಳಿದುಬಂದ ಭೂಮಿ-ಪ್ರಕೃತಿಗಳಂತೆ, ಏಕಾಏಕಿ ಬಂದೆರಗುವ ನಿಗೂಢ ಸಾವು-ಇವುಗಳೊಂದಿಗಿನ ಮನುಷ್ಯ ಸಂಬಂಧವನ್ನು ಅರಿಯಲು ಮತ್ತು ಅರ್ಥೈಸಿಕೊಳ್ಳಲು ಶಿವರಾಮು ಹವಣಿಸಿರುವುದೂ ಇಲ್ಲಿ ವ್ಯಕ್ತವಾಗಿದೆ.

ಬದುಕು ಮತ್ತು ಬರಹಗಳನ್ನು ಬೇರೆಬೇರೆಯಾಗಿ ಪರಿಗಣಿಸದೆ ಇಡಿಯಾಗಿ ನೋಡುತ್ತ, ಸಮಚಿತ್ತದಿಂದ ಪರಿಭಾವಿಸುತ್ತ, ನಿಶಿತ ಒರೆಗೆ ಹಚ್ಚುತ್ತ, ತತ್ವನಿಷ್ಠರಾದ ಶಿವರಾಮು ವಿಮರ್ಶಕರಾಗಿ ಹೆಸರಾದವರು. ಜೀವಪರ ಹೋರಾಟಗಳಲ್ಲಿ ಕ್ರಿಯಾ ಚಟುವಟಿಕೆಗಳಲ್ಲಿ ಭಾಗಿಯಾಗುತ್ತ ತಮ್ಮ ಜೀವಂತಿಕೆಯನ್ನು ಉಳಿಸಿಕೊಂಡು ಬಂದವರು. ಅವರ ಚಿಂತನ ಕ್ರಮಕ್ಕೆ ಬಂಡಾಯ ಚಳವಳಿ ನೆಲೆ ಮತ್ತು ಹಿನ್ನೆಲೆಯಾಗಿದ್ದರೆ ಅದು ಅಸಹಜವೇನಲ್ಲ. ಈ ಗುಣದಿಂದಾಗಿಯೇ ಇಲ್ಲಿನ ಕವಿತೆಗಳಲ್ಲಿ ಸಾತ್ವಿಕ ಸಿಟ್ಟಿನ ಲಾವಾ ಒಳಗೇ ಪ್ರವಹಿಸಿರುವುದನ್ನು ಕೂಡಾ ಗಮನಿಸ ಬಹುದಾಗಿದೆ.

ಬಂಧ, ಶಿಲ್ಪ, ಸೌಂದರ್ಯಗಳ ದೃಷ್ಟಿಯಲ್ಲಿ ಇಲ್ಲಿನ ಕೆಲವು ಕವಿತೆಗಳು ಸಡಿಲವಾಗಿ ಕಾಣಿಸಿದರೂ, ಒಟ್ಟಾರೆಯಾಗಿ ಈ ಕವಿತಾ ಸಂಕಲನ ಪಡೆದುಕೊಂಡಿರುವ ಕಾಂತಿ ಮತ್ತು ಅರ್ಥಸೌಂದರ್ಯ ವಿಭಿನ್ನ ಬಗೆಯವು.

ಜಿ. ಪಿ. ಬಸವರಾಜು